

# ಸಿದ್ಧಗಂಗಾ



ನವೆಂಬರ್ ೨೦೦೦




ಚಿಕ್ಕತೊಟ್ಲುಕೆರೆಯಲ್ಲಿ ನವೆಂಬರ್ ೬ರಂದು ಏರ್ಪಡಿಸಲಾಗಿದ್ದ ಶ್ರೀಮನ್ ನಿರಂಜನ ಪ್ರಣವ ಸ್ವರೂಪಿ ಲಿಂಗೈಕ್ಯ ಶ್ರೀ ಅಟವೀ ಶಿವಯೋಗಿಗಳ
ಹಾಗೂ ಶ್ರೀ ಮ.ನಿ.ಪ್ರ. ಲಿಂ. ಶ್ರೀ ಶ್ರೀ ಅಟವೀ ಸಿದ್ಧಲಿಂಗ ಶಿವಯೋಗಿಗಳ ಸುವರ್ಣ ಮಹೋತ್ಸವ ಕಾರ್ಯಕ್ರಮವನ್ನು ತ್ರಿವಿಧ ದಾಸೋ[illegible]
ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಉದ್ಘಾಟಿಸಿದರು. ಈ ಸಂ[illegible]ರಮಪೂಜ[illegible]
ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ, ಹಿರೇಮಠದ ಡಾ. ಶ್ರೀ ಶ್ರೀ ಶಿವಾನಂದ[illegible]
ಮುಂಡರಗಿ ಮಠದ ಅನ್ನದಾನೀಶ್ವರ ಸ್ವಾಮಿಗಳು, ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ [illegible]

**ಮುದ್ರಕರು :**
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೪೦೮೭

ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ

॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಅವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೬ ನವೆಂಬರ್ ೨೦೦೦ ಸಂಚಿಕೆ : ೧೧

## ಒಳಪುಟಗಳಲ್ಲಿ ......



**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**

| | |
|---|---|
| ವಾರ್ಷಿಕ ಚಂದಾ | ರೂ. ೬೦/- |
| ಆಜೀವ ಸದಸ್ಯತ್ವ | ರೂ. ೫೦೦/- |
| ಬಿಡಿ ಪ್ರತಿ | ರೂ. ೫.೦೦ |



## ಒಂದು ಬಹಿರಂಗ ಪತ್ರ......

ಈ ಸಂಪಾದಕೀಯವನ್ನು ಬರೆಯುವುದಕ್ಕೆ 'ಎಳ್ಳಷ್ಟೂ ಮನಸ್ಸಿರಲಿಲ್ಲ'. ಅಭಿಮಾನಿಗಳ, ವಿಚಾರಶೀಲರ, ಹೃದಯವಂತರ ಒತ್ತಾಯಕ್ಕೆ ಮಣಿದು ಪ್ರತಿಕ್ರಿಯಿಸುತ್ತಿದೆ 'ಸಿದ್ಧಗಂಗಾ'.

'ಕಲ್ಯಾಣ ಕಿರಣ' ಅಕ್ಟೋಬರ್ ೨೦೦೦ದ ಸಂಚಿಕೆಯ 'ಚಿ.ಮೂ. ಅವರ ವೀರಶೈವ ಧರ್ಮ ಚರಿತ್ರೆ - ಭಾಗ೨, ವಿಮರ್ಶೆ ಭಾಗ-೪' ಎಂಬ ಶೀರ್ಷಿಕೆಯಡಿಯಲ್ಲಿ 'ಮಾತಾಜಿ' (ಮಾತೆ ಮಹಾದೇವಿಯವರು) ಬರೆಯುತ್ತ ಪುಟ ೧೭ ರಿಂದ 'ಸಿದ್ಧಗಂಗಾ ಮಠದ ಪೂಜ್ಯರು ಗಣಪತಿಯ ಪೂಜೆ, ಪ್ರತಿಷ್ಠಾಪನೆ ಮಾಡುವುದಲ್ಲದೆ ಯಾವ ದೇವತೆಯ ಗುಡಿಯ ಪ್ರಾರಂಭೋತ್ಸವಕ್ಕೂ ಹೋಗುತ್ತಾರೆ. ಇವರು ಮಾಡುವ ಆಚರಣೆ ನೋಡಿ ಇದೇ ಲಿಂಗಾಯತ ಧರ್ಮ' ಎಂದು ಚಿ.ಮೂ. (ಡಾ. ಚಿದಾನಂದಮೂರ್ತಿ) ಅಂಥ ವಿದ್ವಾಂಸರು ಶಾಸನ ಬರೆಯುವುದಾದರೆ ಭ್ರಷ್ಟಾಚಾರ ಮಾಡುವ ಸರ್ಕಾರಿ ಅಧಿಕಾರಿ, ಮಂತ್ರಿಗಳನ್ನು ನೋಡಿ ಭಾರತದ ಸಂವಿಧಾನದಲ್ಲಿ ಭ್ರಷ್ಟಾಚಾರವೂ ಒಂದು ಅತ್ಯಗತ್ಯ ಆಚರಣೆ ಎಂದು ಬರೆಯ ಬೇಕಾದೀತು' ಎಂಬ ಕುಹಕನ್ನಾಡಿದ್ದಾರೆ. ಪರಮಪೂಜ್ಯ ಸಿದ್ಧಗಂಗಾ ಶ್ರೀಗಳವರು ಆಚರಿಸುತ್ತಿರುವ ಧರ್ಮದಲ್ಲಿ 'ತಮ್ಮ ಲಿಂಗಾಯಿತ'ವನ್ನು ಕಾಣಲು 'ಮೊಸರಿನಲ್ಲಿ ಕಲ್ಲು ಹುಡುಕುವ' ಪ್ರಯತ್ನ ನಡೆಸಿದ್ದಾರೆ.

### ಮಾನವ ಧರ್ಮ

ಸಿದ್ಧಗಂಗಾ ಪೂಜ್ಯ ಶ್ರೀಗಳವರದು ಮಾತೆ ಮಹಾದೇವಿಯವರು ಅಪಲಾಪಿಸುತ್ತಿರುವ ಧರ್ಮವಲ್ಲ. ಅಥಣಿಯ ಮಹಾಪೂಜ್ಯ ಶ್ರೀ ಮುರುಘೇಂದ್ರ ಶಿವಯೋಗಿಗಳು ಹೇಳಿರುವ '*ಆವಾತ ಕಾಯಕವ ಮಾಡಿದರು ಬಸವೇಶ ಆವಗಂ ಶರಣರನು ಸೇವಿಪನು ಬಸವೇಶ*' ಎಂಬ ಸುವಿಶಾಲ ಧರ್ಮ. ಅಲ್ಲಿ ಬಸವಣ್ಣನವರು ಹೇಳುವಂತೆ 'ಅನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು' ಎಂಬ ಧರ್ಮ. 'ಅನ್ಯರಿಗೆ ಅಸಹ್ಯ ಪಡಬೇಡ'ವೆಂಬ 'ಅಂತರಂಗ-ಬಹಿರಂಗ ಶುದ್ಧಿಯ' ಧರ್ಮ. ಪ್ರತಿನಿತ್ಯ ಏಳುಸಾವಿರಕ್ಕೂ ಹೆಚ್ಚು ಹಸಿದ ಚರಜಂಗಮದ ಹೊಟ್ಟೆಗೆ 'ಇವನಾರವ, ಇವನಾರವ, ಇವನಾರವನೆನ್ನದೆ, ಇವ ನಮ್ಮವ, ಇವನಮ್ಮವ, ಇವ ನಮ್ಮವನೆನ್ನುವ' ಬಸವಧರ್ಮ. ನೂರು ಪ್ರವಚನಗಳಿಗಿಂತ, ಮಾತುಗಳಿಗಿಂತ, ಹಸಿದು ಬಂದವನಿಗೆ 'ಪ್ರಸಾದ ಮಾಡಿ ಕೊಂಡು ಬನ್ನಿ' ಎಂದು ಹೇಳುವ ಆಚರಣೆಯ ನಿಷ್ಠೆಯ ನಿಜಪುನೀತ ನಿಶ್ಚಿಂತ ಮಾನವ ಧರ್ಮ.

### ಬಸವಣ್ಣನವರ ತತ್ವಾದರ್ಶಗಳ ಪ್ರಯೋಗಶಾಲೆ

ಶ್ರೀಗಳವರಿಗೆ ಇಷ್ಟಲಿಂಗವೆಂಬುದು ಕರಸ್ಥಲದ ಕುರುಹು ಮಾತ್ರವಲ್ಲ; ಅಂತರಂಗದ ಅರಿವು. ಸೇವೆಯನ್ನೇ, ದಾಸೋಹದ ಒಳ-ಹೊರಗನ್ನೇ ಅನುಭಾವವೆಂದು ನಂಬಿ ನಡೆದಿರುವ ಧರ್ಮ. 'ದಯವೇ ಧರ್ಮದ ಮೂಲವಯ್ಯಾ' ಎಂಬ ಮಾನವೀಯತೆಯ ಆರಾಧನೆಯ ಧರ್ಮ. ಶ್ರೀಗಳವರು ಮಾಡುವ ಏಕಾಂತದ ಇಷ್ಟಲಿಂಗ ಪೂಜೆ ಲೋಕಾಂತದ ಕಲ್ಯಾಣಕ್ಕಾಗಿ ಎಂಬುದನ್ನು ಸಮಾಜ ಇಂದು ಅರಿತಿದೆ. ಕೃತಜ್ಞತೆಯ ನಮನಗಳನ್ನು ಸಲ್ಲಿಸುತ್ತಿದೆ. ಮಾತೆ ಮಹಾದೇವಿಯವರು ಹೇಳುವಂತೆ ಇಷ್ಟಲಿಂಗ ನಿಷ್ಠೆ, ಬಸವಾದಿ ಪ್ರಮಥರು ಪ್ರತಿಪಾದಿಸಿದ ಲಿಂಗಾಯಿತ ಧರ್ಮ, ವಚನಸಾಹಿತ್ಯ ಎಂದು 'ಬಾಯಲ್ಲಿ ಹೇಳುವ ಧರ್ಮವಾಗದೆ ಬಸವಣ್ಣನವರ ತತ್ವಾದರ್ಶಗಳ ಪ್ರಯೋಗಶಾಲೆಯಾಗಿದೆ. ಸಿದ್ಧಗಂಗಾ ಶ್ರೀಗಳವರು ಆಚರಿಸುತ್ತಿರುವ ಧರ್ಮ. ಲಿಂಗಾಯಿತ ಧರ್ಮದ ಅಂತರಾರ್ಥವನ್ನು, ಆಚರಣೆಯ ವಿಧಿ-ವಿಧಾನಗಳನ್ನು ಸಿದ್ಧಗಂಗಾ ಪೂಜ್ಯರು ಮಾತೆಮಹಾದೇವಿಯವರಿಂದ ತಿಳಿದುಕೊಳ್ಳಬೇಕಾಗಿಲ್ಲ.

### ಇಷ್ಟಲಿಂಗಾರ್ಚನೆ

'ನಿಮಗೇನಾದರೂ ವಿಶೇಷ ಬೃಹತ್ ಸಮಾರಂಭದಲ್ಲಿ ಎಲ್ಲರಿಗೂ ಕಡುಬು ಉಣ್ಣಿಸಬೇಕೆಂಬ ಬಯಕೆ ಇದೆಯೆ? ಮಾಡಿಕೊಡುವ ಅಡಿಗೆ ಭಟ್ಟರು ಯಾರು ಎಂಬ ಚಿಂತೆಯುಂಟೆ? ಇನ್ನೇನೂ ಚಿಂತಿಸುವ ಕಾರಣವಿಲ್ಲ, ಗಣಪತಿ ಹಬ್ಬದಲ್ಲಿ ಇಪ್ಪತ್ತುಸಾವಿರ ಕಡುಬು ಮಾಡಿ ದಾಖಲೆ ನಿರ್ಮಿಸಿರುವ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳನ್ನು ಆಹ್ವಾನಿಸಿರಿ. ನಿಮ್ಮ ಇಷ್ಟಪೂರ್ತಿಯಾಗಿ ನಿಮ್ಮ ಬಂಧು-ಮಿತ್ರರಿಗೆ ಕಡುಬಿನ ಊಟ ಮಾಡಿಸಬಹುದು' (ಪುಟ ೧೭) ಎಂದು ವ್ಯಂಗ್ಯವಾಡಿದ್ದಾರೆ ಮಾತೆ ಮಹಾದೇವಿಯವರು. ಒಂದು ಧರ್ಮಪೀಠದ ಜವಾಬ್ದಾರಿ ಸ್ಥಾನದಲ್ಲಿರುವವರು ಇಂಥ ಸಣ್ಣಮಾತುಗಳನ್ನಾಡಬಾರದು. ಸ್ಥಾನಕ್ಕೆ ತಕ್ಕಂತೆ ನಡೆ-ನುಡಿಯಿಲ್ಲದಿದ್ದರೆ ಅದು ಶೋಭಿಸುವುದಿಲ್ಲ. 'ಕಡುಬಿನ ಕಾಯಕ' ನಾಚುವಂತಹದಲ್ಲ; ಕೈಮುಗಿಯುವಂತಹುದು. ಹಸಿದ ಹೊಟ್ಟೆಗೆ ವೇದಾಂತವಲ್ಲ ಎಂದರು ಶ್ರೀ ಸ್ವಾಮಿ ವಿವೇಕಾನಂದರು. ತಮ್ಮ ಸ್ವಂತ ಊರುಗಳಿಗೆ ಹೋಗಲೂ ಚೈತನ್ಯವಿಲ್ಲದ ಏಳೂವರೆ ಸಾವಿರ ಜಂಗಮ ಮಹಾಗಣಂಗಳಿಗೆ ಹಬ್ಬದ ಕಡುಬಿನ ಪ್ರಸಾದವನ್ನು ಸಿದ್ಧಮಾಡುವ ಕಿರಿಯಶ್ರೀಗಳವರ ಕಾಯಕ 'ಇಷ್ಟಲಿಂಗಾರ್ಚನೆ' ಯಷ್ಟೇ ಪವಿತ್ರ, ಪೂಜನೀಯ ಎಂಬುದನ್ನು ನಾಡು ತಿಳಿದಿದೆ, ಗೌರವಿಸುತ್ತಿದೆ.

(ಹಿನ ಪುಟ ನೋಡಿ)





### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಜ್ಞಾನಾಗಮ ಗುರುವೆ ಮಾನವ್ಯದೀವಿಗೆಯೆ<br>
ಲೋಕಸೇವೆಗೆ ಬಂದ ಸಿರಿದೊರೆಯೆ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನ್ನ ತಾನರಿದಿರುವ ಅನ್ಯಭಿನ್ನವ ತೊರೆದ<br>
ತನ್ನಲ್ಲಿ ತಾ ತನ್ಮಯವಾದ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾನನಿಧಿ ಶ್ರೀಘನವೆ ಗುಣಗಣಿ ರತುನವೆ<br>
ಶಾಂತ ಭಾಸ್ಕರರುಚಿ ರೂಪವೆ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇವಜ್ಯೋತಿಯ ಪ್ರಭೆಯ ಸೇವಭಾವದೊಳಿರಿಸಿ<br>
ದಾಸೋಹ ಬೆಳಗಿರುವ ಶಿವಗುರುವೆ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಧಾರಾಳ ದಾಸೋಹಿ ಜೀವಾಳ ಶಿವಭಾವಿ<br>
ಆಳ-ನಿರಾಳರ ಅನುಭಾವಿ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಯೆಯ ಗೆದ್ದಿರುವೆ ಮಾಯೆಯನಾಡಿಸುತಿರುವೆ<br>
ಮಾಯೆಯನ್ನಿಡಿತಂದು ದುಡಿಸಿರುವೆ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸ್ಥಾವರ ಕಾಯದಿ ಜಂಗಮ ಜ್ಯೋತಿಯನಿರಿಸಿ<br>
ಅಂಗಲಿಂಗವೆನಿಸಿ ಬೆಳಗಿರುವ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಧರ್ಮಸಾಧನೆಗಾಗಿ ಭಕ್ತಿಯೋಗವ ನಡೆಸಿ<br>
ಶಕ್ತಿ-ಶಿವ ಸಿದ್ಧಾಂತ ಬೆಳಗಿರುವ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಯೋಗಿ ಕಾಯಕವು ಜಂಗಮ ದೇವಾಲಯವು<br>
ಶಿವಭಾವ ಶಿವಜ್ಞಾನ ಮಂದಿರವು । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಕಾಯ ಧರಿಸಿಯೂ ಅಭಿಮಾನ ತೊರೆದಿರುವ<br>
ಶಿವಬೆಳಕ ಚೆಲ್ಲಾಡಿರುವ ಶಿವಯೋಗಿ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ

### ಶ್ರೀವಾಣಿ



## ಸಮಾಜದ ಸಂಜೀವಿನಿ ಶಕ್ತಿ

ವೀರಶೈವ ಧರ್ಮದಲ್ಲಿರುವ ಒಳಪಂಗಡಗಳನ್ನು ನಿರ್ಮೂಲನೆ ಮಾಡಿ ಸಮಾಜದ ಸಂಘಟನೆಯನ್ನು ಬಲಪಡಿಸುವ ನಿಟ್ಟಿನಲ್ಲಿ ಯುವಕರು ಮುಂದಾಗಬೇಕು. ಒಳಪಂಗಡಗಳ ಹೆಸರಿನಲ್ಲಿ ಸಮಾಜವನ್ನು ಛಿದ್ರಗೊಳಿಸುವ ಪ್ರವೃತ್ತಿಯನ್ನು ಸಮಾಜ ಬಾಂಧವರು ಮತ್ತು ಎಲ್ಲಾ ಮಠಾಧೀಶರು ಒಕ್ಕೊರಲಿನಿಂದ ಖಂಡಿಸಬೇಕು. ಹಲವಾರು ಕಾರಣಗಳಿಂದ ಇಂದು ವೀರಶೈವ ಸಮಾಜ ಛಿದ್ರವಾಗಿದ್ದು ಈ ಸಮಾಜದ ಒಗ್ಗಟ್ಟಿಗೆ, ಒಗ್ಗೂಡುವಿಕೆಗೆ ಯುವಜನರು ತತ್ವಪ್ರೇಮಿಗಳಾಗಿ ಒಳಪಂಗಡಗಳ ನಿರ್ಮೂಲನೆಯ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕು.

ಸಾವಿರಾರು ವರ್ಷಗಳ ಅವಧಿಯಲ್ಲಿ ಕೆಲವೇ ಕೆಲವು ಪ್ರವಾದಿಗಳನ್ನು ಜಗತ್ತಿನಾದ್ಯಂತ ಜನರು ಈಗಲೂ ಸ್ಮರಿಸುತ್ತಾರೆ. ಏಸುಕ್ರಿಸ್ತ, ಮಹಮ್ಮದ್ ಪೈಗಂಬರ್, ಮಹಾವೀರ, ಬುದ್ಧ, ಬಸವಣ್ಣನವರು ಮುಂತಾದ ಮಹಾತ್ಮರು ಮನುಕುಲಕ್ಕೆ ಮಾನವಧರ್ಮ ನೀಡಿದರು. ಅಂಥವರಲ್ಲಿ ಬಸವಣ್ಣನವರು ಜಗತ್ತಿಗೆ ಕೊಟ್ಟಿರುವ ಸಂದೇಶವನ್ನು ಅರ್ಥಮಾಡಿಕೊಳ್ಳಬೇಕು. ಭಾರತೀಯ ಸಂಸ್ಕೃತಿಯ ತಿರುಳನ್ನು ಜಗತ್ತಿಗೆ ಕೊಟ್ಟ ಮಹಾಮಾನವತಾವಾದಿ ಬಸವಣ್ಣನವರು.

ಬಸವಣ್ಣನವರು ಕೊಟ್ಟ ಭಾರತೀಯ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಕೆಲವರು ಅಪರಾಧ ಮಾಡಿದರು. ಇದರಿಂದ ವಿಕೃತವಾಯಿತು. ಹಾಗಾಗಿ ಸಮಾಜ ಸಂಕುಚಿತವಾಯಿತು. ಬಸವಣ್ಣನವರು ಇಡೀ ಬದುಕನ್ನು ಹಸನುಗೊಳಿಸಿದರು. ಜೀವನ ಉದಾತ್ತವಾಗಬೇಕಾದರೆ, ಅರ್ಥವತ್ತಾಗಬೇಕಾದರೆ ಆಧ್ಯಾತ್ಮೀಕರಣವಾಗಬೇಕೆಂದು ಬಸವಣ್ಣನವರು ಪ್ರತಿಪಾದಿಸಿದರು. ಜೀವನ ಬೇರೆ, ಧರ್ಮಬೇರೆ ಎನ್ನದೇ ಜೀವನವನ್ನು ಅರ್ಥಪೂರ್ಣಗೊಳಿಸಿದರು.

ಪ್ರಜಾಪ್ರಭುತ್ವಕ್ಕೆ ಬಸವಣ್ಣನವರ ತತ್ವಬೇಕು, 'ಎಲ್ಲರ ಶ್ರಮ ಎಲ್ಲರ ಪ್ರಗತಿ' ಪ್ರಜಾಪ್ರಭುತ್ವದ ಉದ್ದೇಶ. ಈ ಉದ್ದೇಶ ಸಾಧನೆಯ ಭಾಗವಾಗಿ ಬಸವಣ್ಣನವರು ಕಾಯಕ ಧರ್ಮವನ್ನು ಪ್ರತಿಪಾದಿಸಿದರು. ಅವರು ಸ್ವತಂತ್ರ ವಿಚಾರವಂತರಾಗಿದ್ದರು. ಆಧುನಿಕ ಜಗತ್ತಿನ ಕಾರ್ಲ್ ಮಾರ್ಕ್ಸ್, ಮಹಾತ್ಮ ಗಾಂಧೀಜಿಯಂಥವರಿಗೆ ಪ್ರೇರಣೆಯಾಗಿದ್ದರು. ಬಸವಣ್ಣನವರು ಮಹಾ ಆಧ್ಯಾತ್ಮ ಚಿಂತಕ, ವಿಭೂತಿಪುರುಷ, ಇಂಥ ಮಹಾನ್ ಪುರುಷನನ್ನು ಅರ್ಥಮಾಡಿಕೊಳ್ಳುವ ಕೆಲಸ ಶ್ರದ್ಧೆಯಿಂದ ನಡೆಯಬೇಕು. ಅವರ ತತ್ವಗಳ ಪ್ರಸಾರವಾಗಬೇಕು. ಅವರು ಪ್ರತಿಪಾದಿಸಿದ ಕಾಯಕತತ್ವದ ಮಹೋನ್ನತ ಅಂಶಗಳನ್ನು ಪ್ರತಿಯೊಬ್ಬ ಮನುಷ್ಯನೂ ತಾನು ಮಾಡುವ ಕೆಲಸದಲ್ಲಿ ಕಾಣುವ ಶ್ರದ್ಧೆ, ನಿಷ್ಠೆಗಳನ್ನು ಬೆಳೆಸಿಕೊಳ್ಳಬೇಕು. ಪ್ರತಿಯೊಬ್ಬರೂ ಶ್ರಮಜೀವಿಗಳಾಗಬೇಕು. ಯಾವುದೇ ಕಾಯಕ ತುಚ್ಛವಲ್ಲ ಎಂದು ಹೇಳಿದ ಬಸವಣ್ಣನವರು ದುಡಿಮೆಯ ಹಿರಿಮೆಯನ್ನು ಎತ್ತಿಹಿಡಿದ ಶ್ರೇಯೋವಂತರು. ಕಾಯಕ ಜೀವಿಗಳೆಂದೂ ಶೂದ್ರರಲ್ಲ; ಸಮಾಜದ ಸಂಜೀವಿನಿ ಶಕ್ತಿಗಳವರು.

**(ಬೆಳಗಾವಿಯಲ್ಲಿ ೧೪.೧೦.೨೦೦೦ದಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಜಿಲ್ಲಾ ಘಟಕದ ರಜತ ಮಹೋತ್ಸವ ಸಮಾರಂಭದಲ್ಲಿ ನೀಡಿದ ಆಶೀರ್ವಚನ)**

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಒಳಗೆಂದೆನು, ಹೊರಗೆಂದೆನು*

*ಅರುಹೆಂದೆನು, ಮರಹೆಂದೆನು*

*ತಾನೆಂದೆನು, ಇದಿರೆಂದೆನು*

*ಬರಿಯ ಬಯಲ ಭ್ರಮೆಯೊಳಗಾಯಿತ್ತಲ್ಲಾ ಈ ಲೋಕ!*

*ಒಳಗು ತಾನೆ ಹೊರಗು ತಾನೆ*

*ಅರುಹು ತಾನೆ ಮರಹು ತಾನೆ*

*ತೆರಹಿಲ್ಲದ ಪರಿಪೂರ್ಣ ಪರಾಪರವು ತಾನೆ ನೋಡಾ*

*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !*

ಅದ್ವೈತ ಭಾವನೆಯಳವಡದ ಸಂಸಾರಿಗಳು ಒಳಗೆ, ಹೊರಗೆ, ಅರುಹು, ಮರಹು, ತಾನು, ಇದಿರು ಎಂಬ ದ್ವೈತ ವ್ಯವಹಾರವನ್ನೇ ನಡೆಸಿಬಿಡುವರು. ಇದೆಲ್ಲ ಕೇವಲ ಭ್ರಮೆಯು ನಿಜವಾದ ಸಂಗತಿಯೆಂದರೆ ತಾನೆ ಎಲ್ಲವೂ ಆಗಿ ಪರಿಪೂರ್ಣ ತನ್ನನೇ ಆಗಿರುವನು. ಪರಿಪೂರ್ಣವಾದುದಕ್ಕೆ ಅತೃಪ್ತಿಯೆಂಬುದೇ ಇರುವುದಿಲ್ಲ. ನಿತ್ಯ ಸಂತೃಪ್ತವಾಗಿರುವುದೇ ಅದರ ಸ್ವಭಾವ. ಇಂತಹ ನೈಜ ಜ್ಞಾನವನ್ನು ಪಡೆದ ಶರಣನಿಗೆ ಯಾವ ವಾಂಛೆಯೂ ಇರುವುದಿಲ್ಲ. ಅವನು ಸುಖರೂಪನೇ ಆಗಿಬಿಡುವ.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಅಭಿನಂದನೆ



ಶ್ರೀ 'ಕವಿತಾಕೃಷ್ಣ' ತುಮಕೂರು ತಾಲ್ಲೂಕು ಎರಡನೆ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಸರ್ವಾನು ಮತದಿಂದ ಆಯ್ಕೆಯಾಗಿರುವುದು 'ಸಿದ್ಧಗಂಗಾ'ಕ್ಕೆ ಅಪಾರ ಸಂತೋಷ ವನ್ನುಂಟುಮಾಡಿದೆ. ಈ ಶುಭಸಂದರ್ಭ ದಲ್ಲಿ ಶ್ರೀಯುತರನ್ನು ತುಂಬುಹೃದಯ ದಿಂದ ಅಭಿನಂದಿಸುತ್ತದೆ. ಅಂತೆಯೇ ಕವಿತಾಕೃಷ್ಣರ ಸಾಹಿತ್ಯ ಸೇವೆಯನ್ನು ಪುರಸ್ಕರಿಸಿದ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳನ್ನು, ಆಯ್ಕೆ ಕೈಂಕರ್ಯದಲ್ಲಿ ಭಾಗಿಗಳಾದ ಎಲ್ಲ ಅಭಿಮಾನಿಗಳನ್ನು ಸ್ಮರಿಸುತ್ತದೆ.

ಶ್ರೀ ಕವಿತಾಕೃಷ್ಣ ಅವರು ಸಿದ್ಧಗಂಗಾ ಪತ್ರಿಕೆಯ ಲೇಖಕ ಬಳಗದ ಮಾನನೀಯ ಸದಸ್ಯರು. ಸಿದ್ಧಗಂಗಾ ಶ್ರೀಮಠದ ಪವಿತ್ರ ಪರಿಸರದಲ್ಲಿ ಅರಳಿದವರು. ಪೂಜ್ಯ ಶ್ರೀಗಳವರಲ್ಲಿ ಅನನ್ಯ ಭಕ್ತಿ ಶ್ರದ್ಧೆಯನ್ನಿರಿಸಿಕೊಂಡಿರುವ ಸಾಹಿತ್ಯಸಂಸ್ಕಾರನಿಷ್ಠರು. ಶ್ರೀಗಳವರನ್ನು ಕುರಿತು 'ಸಿದ್ಧಗಂಗಾ ಶ್ರೀಗಳು', 'ಶತಮಾನದ ಶಕಪುರುಷ ಡಾ| ಶಿವಕುಮಾರ ಸ್ವಾಮಿಗಳು' ಕೃತಿಗಳನ್ನು ರಚಿಸಿ ಶ್ರೀಗಳವರಲ್ಲಿ ತಮಗಿರುವ ಅಭಿಮಾನವನ್ನು ದಾಖಲಿಸಿರುವುದಲ್ಲದೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೃಷಿ ಮಾಡಿ ೧೪ ಕವನ ಸಂಕಲನ, ೧೫ ನಾಟಕ, ೧೧ ಜೀವನ ಚರಿತ್ರೆ, ೩ ಸಂಶೋಧನೆ, ೫ ಸಂಪಾದನೆ, ೬ ಇತರೆ ಹಾಗೂ ೨ ಧ್ವನಿಸುರುಳಿಗಳನ್ನು ರಚಿಸಿ ಸಾಹಿತ್ಯಸೇವೆ ಮಾಡಿದ್ದಾರೆ.

ಶ್ರೀಯುತರನ್ನು ಕಲಾ ಏಕಲವ್ಯ, ಸಾಹಿತ್ಯರತ್ನ, ದಾಸ ಸಾಹಿತ್ಯ ಸುಧಾಕರ, ಶಿಕ್ಷಕರತ್ನ, ಸರ್ವೋತ್ತಮ ಆಚಾರ್ಯ ಎಂಬುದಾಗಿ ಸಂಘ-ಸಂಸ್ಥೆಗಳು, ಪ್ರತಿಷ್ಠಾನಗಳು, ಮಠಗಳು ಗೌರವಿಸಿರುವುದು ಹೆಮ್ಮೆ ಎನಿಸುತ್ತದೆ.

ಶ್ರೀ ಕವಿತಾಕೃಷ್ಣರು ಹಲವು ಸಂಘ-ಸಂಸ್ಥೆಗಳ ಸಂಸ್ಥಾಪಕ ಕೀರ್ತಿಭಾಜನರಾಗಿದ್ದಾರೆ. ಸೇವಾ ಸಹೃದಯ ಸಂಪನ್ನ, ಸಂಘಟನಾ ಚತುರ, ಸ್ವಾಭಿಮಾನಿ, ಗುರುಜನಭಕ್ತಿಶೀಲ, ಕ್ರಿಯಾ ಜಾಗೃತರಾದ ಶ್ರೀಯುತರು ಕ್ಯಾತಸಂದ್ರ ನಿವಾಸಿಗಳಾಗಿ, ಗ್ರಾಮಾಭಿಮಾನಿ ಜಾನಪದ ಪ್ರವೃತ್ತಿಯ ನಮ್ರರೆನಿಸಿರುವುದು 'ಸಿದ್ಧಗಂಗಾ'ಕ್ಕೆ ಅಭಿಮಾನವೆನಿಸುತ್ತದೆ.

ಶ್ರೀಯುತರಿಂದ ಸಾಹಿತ್ಯಸೇವೆ ಮುಂದುವರಿಯಲಿ ಎಂದು ಆಶಿಸುತ್ತ, ಶ್ರೀ ಸಿದ್ಧಗಂಗಾ ಗುರುಪರಂಪರೆ ಶ್ರೀ ಕವಿತಾಕೃಷ್ಣರಿಗೆ ಸಕಲ ಸನ್ಮಂಗಳವನ್ನುಂಟು ಮಾಡಲಿ ಎಂದು ಹಾರೈಸುತ್ತದೆ.





## ಒಂದು ಬಹಿರಂಗ ಪತ್ರ......

(೨ನೇ ಪುಟದಿಂದ ಮುಂದುವರೆದುದು)

'ಪೂಜ್ಯ ಸಿದ್ಧಗಂಗಾ ಶ್ರೀಗಳ ಬಗ್ಗೆಯಾಗಲೀ, ಸುತ್ತೂರು ಮಠದವರ ಬಗ್ಗೆಯಾಗಲೀ ಪ್ರಸ್ತಾಪಿಸಲು ನನಗೆ ಎಳ್ಳಷ್ಟೂ ಮನಸ್ಸಿರಲಿಲ್ಲ, ಆದರೆ ಚಿ.ಮೂ. ಅವರು ಅನವಶ್ಯಕವಾಗಿ ತಪ್ಪು ಸಾಕ್ಷಿಗಳನ್ನಾಡಿ ಅವರನ್ನು ಮುಂದಿಟ್ಟದ್ದರಿಂದ, ಅವರ ಆಚರಣೆ ಗಳನ್ನೇ ಲಿಂಗಾಯಿತ ಧರ್ಮೀಯರು ಅಧಿಕೃತ ಧರ್ಮಾಚರಣೆ ಎಂದು ತಿಳಿಯಬಾರದು ಎಂದು ನಾನು ಅನಿವಾರ್ಯವಾಗಿ ಪ್ರಸ್ತಾಪಿಸಿದ್ದೇನೆ. ಇವರು ಮತ್ತು ಇನ್ನೂ ಅನೇಕರು ವೇದ, ಆಗಮ, ಸಂಸ್ಕೃತ ಪಾಠಶಾಲೆ ನಡೆಸುತ್ತಿದ್ದರೆ ಅದೇನೂ ಲಿಂಗಾಯಿತ ಮಠಾಧೀಶರಿಗೆ ಅನುಕರಣೀಯ ಆದರ್ಶವಲ್ಲ' (ಪುಟ ೨೦) ಎಂದಿದ್ದಾರೆ ಮಾತೆ ಮಹಾದೇವಿಯವರು. ಸಿದ್ಧಗಂಗಾ ಶ್ರೀಗಳವರಾಗಲೀ, ಸುತ್ತೂರು ಶ್ರೀಗಳವರಾಗಲೀ ತಮ್ಮ ಆಚರಣೆ 'ಲಿಂಗಾಯತ ಮಠಾಧೀಶರಿಗೆ ಅನುಕರಣೀಯ ಆದರ್ಶ'ವೆಂದು ಎಂದೂ ತಮ್ಮಹಾಗೆ 'ನುಡಿಜಾಣರಾಗಿ' ಹೇಳಿಲ್ಲ, ನಡೆಧೀರರಾಗಿ ತಮ್ಮ ಗುರುಗಳು ತೋರಿಸಿದ 'ಗುರುಪಥ'ದಲ್ಲಿ ನಮ್ರವಾಗಿ ನಡೆದಿದ್ದಾರೆ.

### ಬಸವ ಧರ್ಮ

ಸಿದ್ಧಗಂಗಾ ಪೂಜ್ಯ ಶ್ರೀಗಳವರು ಆಚರಿಸುತ್ತಿರುವ ಬಸವಧರ್ಮ ಧನಮನವುಳ್ಳವರ ಧರ್ಮ, ಜಂಗಮ ದೇವಾಲಯಗಳ ಧರ್ಮ, ನಿರ್ಜೀವಕ್ಕೆ ನೈವೇದ್ಯ ಮಾಡುವ ಧರ್ಮವಲ್ಲ, ಆರ್ತರಿಗೆ ಅರ್ಪಿಸಿಕೊಂಡ ಧರ್ಮ. ಪಶ್ಚಾತ್ತಾಪದ ಸರಳಧರ್ಮ, ಮಾತಿನ ಮಂಟಪವಲ್ಲ, ಕಾಯಕಯೋಗಿಗಳ ಬಾಳದೇಗುಲದಲ್ಲಿ ಬಾಳಿ ಬೆಳಗುವ ಧರ್ಮ. ಸುಲಿಗೆ ವಿರೋಧಿ ಸೇವೋಪಾಸಕ ಧರ್ಮ, ಕೇವಲ ಇಷ್ಟಲಿಂಗವೆಂಬ ಕುರುಹಿಂಗೆ ಬೋನವಹಿಡಿವ ಧರ್ಮವಲ್ಲ, ಜೀವಂತ ದೇಹಿಗಳಿಗೆ ಪ್ರಾಧಾನ್ಯವಿತ್ತ ಅರಿವೆಂಬ ಉದಾತ್ತ ಧರ್ಮ. 'ಲಿಂಗಾಯತ ಪದಕ್ಕೆ ಸಮಾನಾರ್ಥ ವಾಗಿ ವೀರಶೈವ ಬಳಸಬೇಡಿ ಎಂದು ಎಚ್ಚರಿಕೆ ಸಹಿತ ಕೊಡುತ್ತೇವೆ' ಎಂಬ ಅಹಂಕಾರ ಪ್ರಮತ್ತ ಆಜ್ಞಾಪ್ರಧಾನ ಅಧಿಕಾರೀ ಧರ್ಮವಲ್ಲ, ಅನುಭವ ಪ್ರಧಾನ, 'ಎನಗಿಂತ ಕಿರಿಯರಿಲ್ಲ'ವೆಂಬ ಜನತಾಂತ್ರಿಕ ಧರ್ಮ, ವೀರಶೈವ-ಲಿಂಗಾಯಿತ ಎಂಬ ಜಾಲವನ್ನು ಹೆಣೆವ ಧರ್ಮವಲ್ಲ, ಕುಲ-ಲಿಂಗ, ವಯ, ವೃತ್ತಿ ಜನಿತ ಎಲ್ಲ ಭೇದಗಳನ್ನು ನಿರ್ಮೂಲಗೊಳಿಸಿ ಸಾಮಾಜಿಕ ಆರ್ಥಿಕ ಸಮಾನತೆಯನ್ನು ಸಾಧಿಸುವ ಧರ್ಮ, ಕಾಯಕವೇ ಕೈಲಾಸ, ಜೀವವೇ ಶಿವನೆಂದು ನಂಬಿ ನಡೆಯ ಹಚ್ಚಿದ ಧರ್ಮ, ನಾನು ಜ್ಞಾನಿ ನೀನು ಅಜ್ಞಾನಿ ಯೆಂದು ವಾದಿಸುವ ಧರ್ಮವಲ್ಲ, ನಿಮ್ಮನರಿಯದ (ದೇವರನ್ನು) ಜ್ಞಾನವೆಲ್ಲಾ ಅಜ್ಞಾನ ಎಂದು ಸಾರಿಹೇಳುವ ಧರ್ಮ, ಮಾತು ಬಲ್ಲಾತ ಜಾಣನಲ್ಲ ಮತ್ತು ಅನ್ನವನಿಕ್ಕುವವ ಜಾಣನೆಂದರಿತ ಧರ್ಮ, ಸ್ವಮುಕ್ತಿ ಸಾಧನ ಬೋಧಕ ವ್ಯಕ್ತಿನಿಷ್ಠ ಧರ್ಮವಲ್ಲ, ಸ್ವವಿಮೋಚನೆಯೊಡನೆ ಸಾಮೂಹಿಕ ವಿಮೋಚನೆಯನ್ನು ಸಾಧಿಸಲು ಹಚ್ಚಿದ ಸಮಷ್ಟಿ ಧರ್ಮ, ಪ್ರವಚನ ಪರೋಪ ಜೀವಿತ್ವವನ್ನು ಪೋಷಿಸುವ, ಪ್ರೋತ್ಸಾಹಿಸುವ ಧರ್ಮವಲ್ಲ, ಸ್ವಾವಲಂಬನವನ್ನು ಬೀಜ ಮಂತ್ರವನ್ನಾಗಿ ಮಾಡಿದ ಸರ್ವೋದಯ ಧರ್ಮ.

***'ಸದ್ದುಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆಯೇರಿದೆ***
***ಕಾಯಕವೆ ಕೈಲಾಸವೆಂಬುವ ಮಾತು ಕೃತಿಯೊಳು ಮೂಡಿದೆ***
***ಕಾವಿಯುಡುಗೆಯನುಟ್ಟು ನಭವೇ ಕಿರಣ ಹಸ್ತವ ಚಾಚಿದೆ***
***ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರೆದಿದೆ'***

ಎಂಬ ಕವಿ ಡಾ|| ಜಿ.ಎಸ್. ಶಿವರುದ್ರಪ್ಪನವರ ವಾಣಿ ಸಿದ್ಧಗಂಗಾ ಪೂಜ್ಯ ಶ್ರೀಗಳವರ ವೀರಶೈವ ಅಥವಾ ಲಿಂಗಾಯತದ 'ನಿಜಾಚರಣೆ'ಯನ್ನು ಅನಾವರಣಗೊಳಿಸಿದೆ. 'ಧರ್ಮ ಇರುವುದು ಪ್ರೇಮದಲ್ಲಿ, ಬಾಹ್ಯ ಆಚರಣೆಗಳಲ್ಲಿ ಅಲ್ಲ. ಹೃದಯದ ಶುದ್ಧವಾದ ಹಾಗೂ ನಿಷ್ಕಪಟವಾದ ಪ್ರೇಮದಲ್ಲಿ ಧರ್ಮವಿದೆ. ಮನುಷ್ಯನು ದೇಹ ಮತ್ತು ಮನಸ್ಸಿನಲ್ಲಿ ಪರಿಶುದ್ಧನಾಗಿರದೆ ಇಷ್ಟಲಿಂಗಾರ್ಚನೆ ಮಾಡುವುದು ನಿಷ್ಪ್ರಯೋಜಕ. ಹೃದಯ ಪರಿಶುದ್ಧತೆಯಿಲ್ಲದೆ ಇತರರಿಗೆ ಬೋಧಿಸುವವರು ಕೊನೆಯಲ್ಲಿ ತಾವೇ ಸೋತುಹೋಗು ವರು. ಅಂತರಂಗ ಶುದ್ಧಿಯಿಲ್ಲದೆ ಬಾಹ್ಯಪೂಜೆಯಿಂದ ಯಾವ ಪ್ರಯೋಜನವೂ ಇಲ್ಲ.'

ಸಿದ್ಧಗಂಗಾ ಪೂಜ್ಯ ಶ್ರೀಗಳವರಿಗೆ ಮಾತೆ ಮಹಾದೇವಿ ಯವರ ಸರ್ಟಿಫಿಕೇಟಿನ ಅಗತ್ಯವಿಲ್ಲ ಎಂದು 'ಸಿದ್ಧಗಂಗಾ' ತಿಳಿಸಲಾಶಿಸುತ್ತದೆ.

- ಸಂಪಾದಕ

"........ಭರತ ಖಂಡದೊಳಗಿನ ಬೇರೆ ಬೇರೆ ಜನಾಂಗಗಳು ತಮ್ಮತಮ್ಮ ಮಾತೃಭಾಷೆಯ ಜೀರ್ಣೋದ್ಧಾರ ಕಾರ್ಯವನ್ನು ಈಗ ಅನೇಕಾನೇಕ ವರ್ಷಗಳಿಂದ ನಡೆಸಿರುವಂತೆ ಕನ್ನಡಿಗರಾದ ನಾವು ನಡೆಸಿರುವುದಿಲ್ಲವೆಂಬುದನ್ನು ಪ್ರಾಂಜಲಬುದ್ಧಿಯಿಂದ ಒಪ್ಪಿಕೊಳ್ಳಬೇಕು..........."

- 'ಕರ್ನಾಟಕದ ಪಿತಾಮಹ' ರೊದ್ದ ಶ್ರೀನಿವಾಸರಾಯರು

೧೯೨೦ರಲ್ಲಿ ಹೊಸಪೇಟೆಯಲ್ಲಿ ನಡೆದ 6ನೆಯ ಕನ್ನಡ ಸಾಹಿತ್ಯ ಕನ್ನಡ ಸಮ್ಮೇಳನಾಧ್ಯಕ್ಷರು

## ಭಾಷಾತಜ್ಞ, ದಕ್ಷ ಆಡಳಿತಗಾರ
## ಡಾ. ಹಾ.ಮಾ. ನಾಯಕರಿಗೆ ಶ್ರದ್ಧಾಂಜಲಿ



ನಾಡಿನ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾಗಿದ್ದ ಡಾ. ಹಾ.ಮಾ. ನಾಯಕರು ಉತ್ತಮ ಪ್ರಾಧ್ಯಾಪಕರಾಗಿ, ದಕ್ಷ ಆಡಳಿತಗಾರರಾಗಿ, ಉತ್ಕಟ ಕನ್ನಡ ಭಾಷಾಭಿಮಾನಿಯಾಗಿ ಸಾಹಿತ್ಯ ಹಾಗೂ ಆಡಳಿತ ಕ್ಷೇತ್ರಗಳೆರಡರಲ್ಲೂ ವಿಶಿಷ್ಟ ಸೇವೆಯನ್ನು ಸಲ್ಲಿಸಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಅವರು ಸಲ್ಲಿಸಿದ ಸೇವೆ ಅನುಪಮ. ವಿಶ್ವದ ಗಮನವನ್ನು ಸೆಳೆಯುವ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜನಪದ ವಸ್ತುಸಂಗ್ರಹಾಲಯದ ಅಭಿವೃದ್ಧಿಗೆ ಅವರು ವಹಿಸಿದ ಆಸಕ್ತಿ, ನೀಡಿದ ಸಹಕಾರ ಅನನ್ಯ.

ಗುಲ್ಬರ್ಗ ವಿಶ್ವವಿದ್ಯಾನಿಯದ ಕುಲಪತಿಗಳಾಗಿ ಅವರು ಸಲ್ಲಿಸಿದ ಸೇವೆ ಸ್ಮರಣೀಯ. ಕನ್ನಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಡಾ. ಹಾ.ಮಾ.ನಾ. ಅವರು ಕೇಂದ್ರ ಸಾಹಿತ್ಯ ಅಕಾಡೆಮಿ, ಜ್ಞಾನಪೀಠ ಪ್ರಶಸ್ತಿ ಸಲಹಾ ಸಮಿತಿಯ ಸದಸ್ಯ, ತುಲಸೀ ಸಮ್ಮಾನ್ ಆಯ್ಕೆ ಸಮಿತಿಯೂ ಸೇರಿದಂತೆ ಹಲವಾರು ಘನತೆ ಗೌರವವನ್ನು ತಂದುಕೊಟ್ಟ ಹೆಗ್ಗಳಿಕೆ. ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ, ಬೀದರ್‌ನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ, ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷತೆ ಹೀಗೆ ಹಲವಾರು ಗೌರವಗಳನ್ನು ತಮ್ಮದಾಗಿಸಿಕೊಂಡಿದ್ದರು.

ಅರವತ್ತೊಂಬತ್ತು ವಸಂತಗಳನ್ನು ಕಂಡಿದ್ದ ಡಾ. ಹಾ.ಮಾ. ನಾಯಕ ಅವರು ನವೆಂಬರ್ ೧೦ರಂದು ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ. ಅವರು ಶ್ರೀಮಠದ ಬಗ್ಗೆ, ಪರಮಪೂಜ್ಯ ಶ್ರೀಶ್ರೀಗಳವರ ಬಗ್ಗೆ ಅಪಾರ ಗೌರವ, ಭಕ್ತಿಯನ್ನು, 'ಸಿದ್ಧಗಂಗಾ' ಮಾಸಪತ್ರಿಕೆಯ ಬಗ್ಗೆ ಅಪಾರ ಅಭಿಮಾನವನ್ನಿಟ್ಟುಕೊಂಡಿದ್ದರು. ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಕುಟುಂಬದವರಿಗೆ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಯನ್ನು ಆ ದಯಾಮಯನಾದ ಪರಶಿವನು ಕರುಣಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

□

ಶ್ರೀ ಶ್ರೀ ಶಿವಕುಮಾರಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ-೫೭೨೧೦೪
ತುಮಕೂರು ಜಿಲ್ಲೆ, ಕರ್ನಾಟಕ ರಾಜ್ಯ.
☎ ೨೮೨೨೧೧
ಫ್ಯಾಕ್ಸ್ : ೦೮೧೬-೨೮೨೫

ಕ್ರ. ಸಂ. ೧೫೩೩/೨೦೦೦-೦೧ ದಿನಾಂಕ : ೧೩-೧೧-೨೦೦೦

### ಸಂತಾಪ

ಕನ್ನಡ ಸಾಹಿತ್ಯ ಲೋಕದ ಹೆಸರಾಂತ ವಿದ್ವಾಂಸರಾದ ಡಾ. ಹಾ.ಮಾ. ನಾಯಕ ಅವರು ದಿನಾಂಕ ೧೦.೧೧.೨೦೦೦ದಂದು ನಿಧನರಾದುದನ್ನು ತಿಳಿದು ದುಃಖವಾಯಿತು.

ಕನ್ನಡ ನಿಷ್ಠೆಯಲ್ಲಿ ದಿಟ್ಟ ಹೆಜ್ಜೆ ಧೀರನಡೆಯ ಹಾ.ಮಾ.ನಾ. ಅವರ ಅಗಲಿಕೆಯಿಂದ ಕನ್ನಡ ಸಾಹಿತ್ಯಕ್ಕೆ ತುಂಬಲಾರದ ನಷ್ಟವುಂಟಾಗಿದೆ. ಸರಳ ನಡೆ-ನುಡಿಗಳ ನಿರ್ಭೀತಿಯ ಅಭಿಪ್ರಾಯಗಳಿಗೆ ಹೆಸರಾಗಿದ್ದ ದಿವಂಗತರು ಕನ್ನಡ ವಿದ್ವತ್ತಿಗೆ ಗೌರವ ತಂದಿದ್ದರು. ಪ್ರಾಧ್ಯಾಪಕರಾಗಿ, ಅಧ್ಯಯನ ಪೀಠದ ಅಧ್ಯಕ್ಷರಾಗಿ, ಗುಲ್ಬರ್ಗ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದು ಸ್ಮರಣೀಯ. ಅನ್ಯಾಯಕ್ಕೆಂದೂ ಕೈಜೋಡಿಸದೆ ದಾಕ್ಷಿಣ್ಯಕ್ಕೊಳಗಾಗದೆ ಬಾಳಿದ ಶ್ರೀ ಹಾ.ಮಾ. ನಾಯಕರು, ವಿಚಾರವಂತರು. ಜೀವನ ಮೌಲ್ಯಗಳನ್ನು ಪ್ರೀತ್ಯಾದರಗಳಿಂದ ಪಾಲಿಸಿಕೊಂಡು ಬಂದವರು. ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ, ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು. ಅಂಕಣಕಾರರೆಂದೇ ಖ್ಯಾತನಾಮರಾಗಿ ಆ ಪ್ರಕಾರಕ್ಕೆ ಘನತೆ-ಪ್ರತಿಷ್ಠೆಗಳನ್ನು ತಂದುಕೊಟ್ಟಿದ್ದರು.

ಡಾ. ಹಾ.ಮಾ. ನಾಯಕರು ಶ್ರೀಮಠದಿಂದ ಪ್ರಕಟಿತವಾಗುತ್ತಿರುವ ಸಿದ್ಧಗಂಗಾ ಪತ್ರಿಕೆಯನ್ನು ತ್ರೈಮಾಸಿಕದಿಂದ ಮಾಸಿಕವಾಗಿ ಹೊರಬರುವಂತೆ ಬಿಡುಗಡೆ ಮಾಡಿದುದನ್ನು ಗುರುವಂದನ ಸಮಾರಂಭದಲ್ಲಿ ಸಂಸ್ಥೆ ನೀಡಿದ ಸನ್ಮಾನವನ್ನು ಸ್ವೀಕರಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇವೆ.

ದಿವಂಗತರ ಆತ್ಮಕ್ಕೆ ಶಾಂತಿಯನ್ನು ಮತ್ತು ಕುಟುಂಬ ವರ್ಗದವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ದಯಾಮಯನಾದ ಪರಮಾತ್ಮನು ನೀಡಲೆಂದು ಹಾರೈಸುತ್ತೇನೆ.

(ಶ್ರೀ ಶಿವಕುಮಾರ ಸ್ವಾಮಿಗಳು)
ಶ್ರೀ ಸಿದ್ಧಗಂಗಾ ಮಠ







## ಧರ್ಮ

- ಗೊ.ರು. ಚನ್ನಬಸಪ್ಪ,
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು-೮೨

**ಬದುಕು ಎಲ್ಲ ಹೊತ್ತಿಗೆಯಲಿಲ್ಲ, ಹುಗಿದಿಲ್ಲ ದುಡ್ಡಿನಂತೆ**
**ಮಾಡಿದಂತೆ ಅದರಾಟ ಮಾಟ, ಒಟ್ಟಿದರೆ ಗುಡ್ಡದಂತೆ,**
**ಕೈಗೆ ಸಿಕ್ಕೂ ಸಿಗದಂತೆ ಬೂರಲದ ಅರಳೆ ಹೊರಳಿದಂತೆ**
**ಬಟ್ಟ ಬಯಲಲ್ಲಿ ಗುಟ್ಟನೊಡೆದು ಗಾಳಿಯಲಿ ಹರಡಿದಂತೆ!**

ನಮ್ಮ ನಾಡಿನ ಹಿರಿಯ ಕವಿ ಚನ್ನವೀರ ಕಣವಿ ಅವರ ಕವನವೊಂದರ ಸಾಲುಗಳಿವು. ಬದುಕಿಗೆ ಬರೆದಿರುವ ವ್ಯಾಖ್ಯೆಯಂತಿರುವ ಈ ಸಾಲುಗಳು ಚಿಂತನೆಗೆ ಒಳ್ಳೆಯ ಗ್ರಾಸ ಒದಗಿಸುತ್ತವೆ. ಬದುಕೆಂಬುದು ಪುಸ್ತಕದ ಸಾಹಿತ್ಯವಲ್ಲ; ನೆಲದ ಮರೆಯ ನಿಧಾನವೂ ಅಲ್ಲ. ಅದರ ಆಟಮಾಟಗಳು ನಾವು ನಡೆದಂತೆ. ಅದು ಕೈಗೆ ಸಿಕ್ಕೂ ಸಿಗದ ಪಟ್ಟು; ಬಯಲಲ್ಲಿ ಒಡೆದ ಗುಟ್ಟು.

ಬದುಕಿನ ಬ್ರಹ್ಮ ಮಾನವನೇ ಆದರೂ ಅದನ್ನು ಅವನೇ ಇನ್ನೂ ಅರ್ಥಮಾಡಿಕೊಂಡಿಲ್ಲ. ಅದರ ಬಗೆಗೆ ಅವನು ಇನ್ನೂ ಕುತೂಹಲಿಯಾಗೇ ಇದ್ದಾನೆ. ಅದರ ಹುಟ್ಟು-ಬಟ್ಟೆಗಳನ್ನು ತಿಳಿಯುವ ಅನ್ವೇಷಣೆಯಲ್ಲೇ ಇದ್ದಾನೆ. ಇದು ಮಾನವನು ತನ್ನ ಸೃಷ್ಟಿಯಾದಾಗಿನಿಂದಲೂ ನಡೆಸಿರುವ ಹುಡುಕಾಟ. ಈ ಹುಡುಕಾಟದ ಹಾದಿಯಲ್ಲಿ ತಾನೇ ಕಂಡುಕೊಂಡ ಒಂದು ಸಮಾಧಾನ-ಧರ್ಮ.

ಧರ್ಮ ಎನ್ನುವುದೂ ಅಷ್ಟೆ. ಒಬ್ಬೊಬ್ಬನ ದೃಷ್ಟಿಯಲ್ಲಿ ಒಂದೊಂದು ಧರ್ಮ. ಒಡೆಯನ ಧರ್ಮವೇ ಬೇರೆ, ದುಡಿಯುವವನ ಧರ್ಮವೇ ಬೇರೆ. ಗಂಡಿನ ಧರ್ಮವೇ ಬೇರೆ, ಹೆಣ್ಣಿನ ಧರ್ಮವೇ ಬೇರೆ. ಹಾಗೆಯೇ ಮಕ್ಕಳು - ಮುದುಕರ ಧರ್ಮ. ಆದರೆ ಮನುಕುಲದ ಇತಿಹಾಸವನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ಧರ್ಮ ಎನ್ನುವುದು ಮಾನವನ ಬದುಕಿನಲ್ಲಿ ಕೇವಲ ಸೂತ್ರವಾಗಿ ಉಳಿದಿರುವುದೇ ಹೆಚ್ಚು. ಅದು ಬದುಕಿನ ಪಾತ್ರವಾದುದು ಅಪರೂಪ. ಆದುದರಿಂದಲೇ ಮಾನವ ತಾನೇ ಕಂಡುಕೊಂಡ ಸಮಾಧಾನದ ಸೂತ್ರವಾದರೂ ಅವನಿಗೆ ಅದು ಇಂದೂ ಸಮಾಧಾನವನ್ನು ನೀಡಿಲ್ಲ. ವಾಸ್ತವವಾಗಿ ಅದರ ಹೆಸರಿನಲ್ಲೇ ಸಂಬಂಧಗಳನ್ನು ಕಳೆದುಕೊಳ್ಳುತ್ತಿದ್ದಾನೆ. ಒಂದಲ್ಲ ಒಂದು ಕಾರಣದಿಂದ ಅಸಹನೀಯ ಸಂಕಟವನ್ನು ಅನುಭವಿಸುತ್ತಿದ್ದಾನೆ.

ದೂರ ಹೋಗುವುದೂ ಬೇಡ. ಧರ್ಮದ ತವರು ಎಂದು ಹೇಳಿಕೊಳ್ಳುವ ಭಾರತದ ಇಂದಿನ ಪರಿಸ್ಥಿತಿಯನ್ನೇ ಗಮನಿಸಿ. ಧರ್ಮದ ನೆಪದಲ್ಲೇ ನಾವು ನಿತ್ಯವೂ ಕತ್ತಲೆಯ ಕೂಪಕ್ಕೆ ಕಾಲಿಡುತ್ತಿದ್ದೇವೆ. ವ್ಯಕ್ತಿ-ವ್ಯಕ್ತಿ ಸಂಬಂಧಕ್ಕೆ ಬೆಂಕಿ ಹಚ್ಚಿ ಹುಚ್ಚರಂತೆ ಕುಣಿಯುತ್ತಿದ್ದೇವೆ. ಇಂದಿನ ರಾಜಕೀಯ ಪಕ್ಷಗಳ ಅವಾಂತರ, ಅಧಿಕಾರ ಹಿಡಿದವರ ಅಮಲಿನ ಆಟ, ಅಧಿಕಾರ ದೊರೆಯದವರ ಪರದಾಟ, ಮತದಾರರ ಗೊಂದಲ, ಉದ್ಯಮಿಗಳ ಒದ್ದಾಟ, ವರ್ತಕರ ಮೋಸ, ಗ್ರಾಹಕರ ಗ್ರಹಣ, ಮುಕ್ತ ಮಾರುಕಟ್ಟೆಯ ಅವಸರ, ಕೇಂದ್ರದ ತಳಮಳ, ರಾಜ್ಯಗಳ ವ್ಯಾಜ್ಯ, ಆರ್ಥಿಕ ಹಗರಣಗಳ ಮಹಾಪೂರ, ಜಾತಿ ಉಪಜಾತಿಗಳ ವಿಭಜನೆ, ಸಮುದಾಯ ಭಾವನೆಯ ಕೊರತೆ, ಸೇವೆಯಲ್ಲಿರುವವರ ಕರ್ತವ್ಯ ಭ್ರಷ್ಟತೆ, ನಿವೃತ್ತರ ನಿರ್ಲಿಪ್ತತೆ, ನಿರುದ್ಯೋಗಿಗಳ ಹತಾಶತೆ, ನಿಸರ್ಗ ಪರಿಸರ ನಾಶ, ಶಿಕ್ಷಣ ಕ್ಷೇತ್ರದ ಅವನತಿ, ನಗರ ಜೀವನದ ದುರ್ಭರತೆ, ಗ್ರಾಮೀಣ ಬದುಕಿನ ನೀರಸತೆ - ಇವುಗಳ ಮೊತ್ತ ನಮ್ಮ ಭಾರತ! ಇದು ವಸ್ತುಸ್ಥಿತಿ. ಇದೇನೂ ಗುಟ್ಟಿನ ಸಂಗತಿಯಲ್ಲ; ಗಾಳಿಯಲ್ಲಿ ಹರಡಿದ ಗುಟ್ಟು!

ನಾವೀಗ ಒಂದು ರೀತಿಯ ಮೂಕ ಹಿಂಸೆಗೆ ತುತ್ತಾಗಿದ್ದೇವೆ. ದುಗುಡ-ದಿಗ್ಭ್ರಮೆ, ಭಯ-ಸಂಶಯ, ಅವಿಶ್ವಾಸ-ಅಪನಂಬಿಕೆಗಳ ಮುಳ್ಳುಹಾದಿಯಲ್ಲಿ ನಡೆಯುತ್ತಿದ್ದೇವೆ. ನಮಗೆ ಇಷ್ಟೊಂದು ಸಾಹಿತ್ಯ-ಸಂಸ್ಕೃತಿಗಳ ಪರಂಪರೆಯಿದ್ದರೂ ಸಮುದಾಯ ಜೀವನದಲ್ಲಿ ಏಕೆ ನೆಮ್ಮದಿ ಕಾಣುತ್ತಿಲ್ಲ? ನಮ್ಮನ್ನೆಲ್ಲ ಕಾಪಾಡಬೇಕಾಗಿದ್ದ ಧರ್ಮ ಏನಾಯಿತು? ಧರ್ಮವನ್ನು ನಾವು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ ಎಂಬುದು ಸುಭಾಷಿತ. ಅಂದರೆ ಧರ್ಮ ರಕ್ಷಣೆಯಲ್ಲಿ ನಾವು ಆಸಕ್ತಿ ವಹಿಸಲಿಲ್ಲವೆ? ನಾವು ರಕ್ಷಿಸಬೇಕಾದ ಧರ್ಮವಾದರೂ ಯಾವುದು? ಹೀಗೆ ನೂರು ಪ್ರಶ್ನೆಗಳು ನಮ್ಮ ಮುಂದೆ ನಿಂತು ಕಾಡುತ್ತವೆ.

ಈ ಬಗ್ಗೆ ನಾವೆಲ್ಲ ಗಂಭೀರವಾಗಿ ವಿಚಾರ ಮಾಡಬೇಕಾಗಿದೆ. 'ಧರ್ಮ' ಎಂಬುದನ್ನು ನಾವು ತಪ್ಪಾಗಿ ತಿಳಿದ ಕಾರಣ, ಸಂದರ್ಭಕ್ಕೆ ತಕ್ಕಂತೆ ಧರ್ಮದ ಸೂತ್ರಗಳನ್ನು ತಿರುಚಿಕೊಂಡು ಬಳಸಿದ ಕಾರಣ, ಪೂಜೆ-ಪೌರೋಹಿತ್ಯಗಳನ್ನೇ ಧರ್ಮವೆಂದು ಭಾವಿಸಿದ ಕಾರಣ ಇಂದಿನ ಎಲ್ಲ ಗೊಂದಲಗಳೂ ಉಂಟಾಗಿರುವುದು.

ಬದುಕಿನ ಮೂಲದ್ರವ್ಯವೇ ಧರ್ಮ ಎನ್ನುವುದಾದರೆ ಸಕಲ ಜೀವರಾಶಿಗಳನ್ನೂ ದೇವರೆಂದು ಭಾವಿಸುವ, ಸಮೂಹ ಜೀವನದಲ್ಲಿ ಪರಸ್ಪರ ಪ್ರೇಮ ವಿಶ್ವಾಸದಿಂದ ಬಾಳುವುದೇ ಧರ್ಮವೆಂದು ತಿಳಿಯುವ ಮುಕ್ತ ಮನಸ್ಸು ನಮ್ಮದಾಗಬೇಕು. ಈ ದೃಷ್ಟಿಯಿಂದ ಆತ್ಮನಿರೀಕ್ಷಣೆ ಅಗತ್ಯ. ಇರುವ ದೋಷಗಳನ್ನು ನಿವಾರಿಸಿಕೊಂಡು ವ್ಯಕ್ತಿ-ವ್ಯಕ್ತಿ ಸಂಬಂಧವನ್ನು ಬಂಧುರಗೊಳಿಸುವ, ತುಕ್ಕು ಹಿಡಿದು ಅಪಶ್ರುತಿ ನುಡಿಯುತ್ತಿರುವ ಸಮಾಜ ತಂಬೂರಿಯ ತಂತಿಗಳನ್ನು ಸರಿಪಡಿಸಿ ನೆಮ್ಮದಿಯ ಬದುಕಿನ ಮಧುರ ಶ್ರುತಿ ಮೂಡಿಸುವ ಜೀವನಧರ್ಮ ನಮಗಿಂದು ಬೇಕಾಗಿದೆ. ಅಂತಹ ಜೀವನಧರ್ಮದಿಂದ ಮಾತ್ರ ಸಭ್ಯ ಹಾಗೂ ಸಹನೆಯ ಸಮಾಜ ನಿರ್ಮಾಣ ಸಾಧ್ಯ. ಇದು ಸ್ವತಂತ್ರ ಭಾರತದ ಮುಂದಿರಬೇಕಾದ ಆದರ್ಶ. □



"..............................ಸರಕಾರಗಳಾಗಲಿ, ವಿದ್ಯಾಭ್ಯಾಸ ಇಲಾಖೆಗಳಾಗಲಿ, ವಿಶ್ವವಿದ್ಯಾನಿಲಯಗಳಾಗಲಿ, ಇತರ ಸಾಂಸ್ಕೃತಿಕ ಸಂಸ್ಥೆಗಳಾಗಲಿ, ಕಡೆಗೆ ವ್ಯಾಪಾರ ವಾಣಿಜ್ಯಾದಿ ಸಂಸ್ಥೆಗಳಾಗಲಿ ದೇಶ ಭಾಷೆಗೇ ಮೊತ್ತಮೊದಲನೆಯ ಸ್ಥಾನ ಕೊಡಬೇಕು. ಹಾಗೆ ಮಾಡದಿದ್ದರೆ ಪ್ರಜಾಪ್ರಭುತ್ವದ ಬುಡದ ಬೇರಿಗೆ ಬೆನ್ನೀರೆರೆದಂತಾಗುತ್ತದೆ..... ನಮ್ಮ ಭಾಷೆ ವಿದ್ಯಾಭ್ಯಾಸದ ಅತ್ಯುನ್ನತ ಮಟ್ಟಗಳಲ್ಲಿಯೂ ಶಿಕ್ಷಣ ಮಾಧ್ಯಮವಾಗಲು ಸಮರ್ಥವಾಗಿದೆ ಎನ್ನುವುದರ ಬಗೆಗೆ ಯಾರೂ ಸಂದೇಹ ಪಡಬೇಕಾಗಿಲ್ಲ..... ವಿವಿಧ ವಿಜ್ಞಾನ ಶಾಸ್ತ್ರಗಳಲ್ಲಿರುವ ಸಾವಿರಾರು ಪಾರಿಭಾಷಿಕ ಪದಗಳನ್ನು ನಾವು ಹಾಗೆಯೇ ನಮ್ಮನಮ್ಮ ಲಿಪಿಗಳಲ್ಲಿ ಬರೆದು ವ್ಯವಹರಿಸಿದ್ದೇ ಆದರೆ ವಿಜ್ಞಾನ ವಿದ್ಯೆಗೂ, ಕಾವ್ಯರಂಗದಲ್ಲಿ ಅದರ ಪ್ರಯೋಗಕ್ಕೂ ಸೌಲಭ್ಯವುಂಟಾಗುತ್ತದೆ. ಆದ್ದರಿಂದ ವೈಜ್ಞಾನಿಕ ಪರಿಭಾಷೆಗೆ ನಮ್ಮ ಭಾಷೆಗಳಲ್ಲಿ ಪದಗಳಿಲ್ಲ ಎಂಬ ಕೊರತೆ ಉದ್ಭವಿಸುವುದೇ ಇಲ್ಲ. ಕರ್ನಾಟಕದಲ್ಲಿ ಕನ್ನಡ ಪ್ರಥಮ ಭಾಷೆಯಾಗದಿದ್ದರೆ ಕನ್ನಡಿಗರ ಬಾಳು ಕುಂಠಿತವಾಗುತ್ತದೆ; ಕನ್ನಡಿಗರ ಏಳಿಗೆಗೆ ಧಕ್ಕೆ ಬರುತ್ತದೆ. ಕರ್ನಾಟಕದ ರಚನೆ ಅರ್ಥಹೀನವಾಗುತ್ತದೆ. ಸಾಹಿತ್ಯದ ಕೆಲವು ಪ್ರಕಾರಗಳಲ್ಲಂತೂ ಕನ್ನಡಿಗರು ಮಾತ್ರವಲ್ಲದೆ ಭಾರತೀಯರೂ ಹೆಮ್ಮೆಪಟ್ಟುಕೊಳ್ಳುವಂತಹ ಕೃತಿಗಳು ಮೈದೋರಿವೆ. ಅಷ್ಟೇ ಅಲ್ಲ, ಪೂರ್ಣ ಪರಿಣತ ಸ್ಥಿತಿಗೇರಿರುವ ಪ್ರಪಂಚದ ಯಾವ ಭಾಷೆಯ ಸಾಹಿತ್ಯಕ್ಕಾದರೂ ಕೋಡು ಮೂಡಿಸುವ ಕೃತಿಗಳೂ ಕವನ, ಕಾದಂಬರಿ, ಸಣ್ಣಕತೆ, ನಾಟಕ, ಕಾವ್ಯ ಮಹಾಕಾವ್ಯಾದಿ ಪ್ರಕಾರಗಳಲ್ಲಿ ಹೊರಹೊಮ್ಮಿವೆ. ಕನ್ನಡಿಗರು ವಿನಯಕ್ಕಾಗಿ ಬಗ್ಗಿ ನಡೆಯಬಹುದು: ಆದರೆ ರಿಕ್ತರಂತೆ ಕುಗ್ಗಿ ನಡೆಯಬೇಕಾಗಿಲ್ಲ."

- ರಾಷ್ಟ್ರಕವಿ ಕುವೆಂಪು
ಜ್ಞಾನಪೀಠ ಪ್ರಶಸ್ತಿ ವಿಜೇತರು



"............. ನಮ್ಮ ಸಾಹಿತ್ಯ, ಇತಿಹಾಸ, ಸಂಸ್ಕೃತಿಯನ್ನು ನಾವು ದುರ್ಲಕ್ಷ್ಯ ಮಾಡಿದಷ್ಟು ಮುಂಬರುವ ಯಾವ ಜನಾಂಗವೂ, ರಾಷ್ಟ್ರವೂ ಮಾಡಿರಲಾರದು......... ನಮ್ಮ ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳ ಸಂಜೀವವನ್ನುಣ್ಣದೆ ನಾವು ಕನ್ನಡಿಗರಾಗಲಾರೆವು...... ಕನ್ನಡದ ಇಪ್ಪತ್ತೆಂಟು ಸಾವಿರ ಹಳ್ಳಿಗಳಿಗೆ ಸಾಹಿತ್ಯ, ಸಂಸ್ಕೃತಿ ಹೆಚ್ಚುವುದು ಎಂದು? ಕನ್ನಡ ನಾಡಿಗೇ ನಾಡೇ ಎಚ್ಚದವುದು ಎಂದು?........"

- ವರಕವಿ ದ.ರಾ. ಬೇಂದ್ರೆ
ಜ್ಞಾನಪೀಠ ಪ್ರಶಸ್ತಿ ವಿಜೇತರು





# ವಚನ ಚಳುವಳಿ

- ಲಿಂ. ಡಾ|| ಎಚ್. ತಿಪ್ಪೇರುದ್ರಸ್ವಾಮಿ

ಇದು ಚಳುವಳಿಗಳ ಯುಗ. ಬೆಳಿಗ್ಗೆ ಎದ್ದರೆ ಒಂದಲ್ಲ ಒಂದು ಕಾರಣಕ್ಕಾಗಿ ಒಂದಲ್ಲ ಒಂದು ಕಡೆ ಚಳುವಳಿ ಪ್ರಾರಂಭ ವಾಗುವುದನ್ನು ನೋಡುತ್ತೇವೆ. ವಿದ್ಯಾರ್ಥಿಗಳು, ನೌಕರರು, ಕಾರ್ಮಿಕರು, ರೈತರು ಯಾವುದೋ ತಮ್ಮ ಬೇಡಿಕೆಗಳ ಈಡೇರಿಕೆ ಗಾಗಿ ಚಳುವಳಿಗಿಳಿಯುವುದನ್ನು ಪತ್ರಿಕೆಗಳಲ್ಲಿ ಓದುತ್ತೇವೆ. ಆ ಮಾತಿನ ಮಹತ್ವವೇ ಮರೆಯಾಗುವಷ್ಟರಮಟ್ಟಿಗೆ ಚಳುವಳಿಗಳು ತಲೆಯೆತ್ತುತ್ತಿವೆ. ನಮ್ಮ ಸ್ವಾತಂತ್ರ್ಯದ ಹೋರಾಟವನ್ನೂ 'ಚಳುವಳಿ' ಎಂದೇ ಕರೆದೆವು. ಆ ಸ್ವಾತಂತ್ರ್ಯ ಚಳುವಳಿ ಮಹತ್ತರವಾದ ಉದ್ದೇಶ-ಆಶಯಗಳಿಂದ ಪ್ರೇರಿತವಾಗಿತ್ತು. ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ ಸತ್ಯ-ಅಹಿಂಸೆಗಳ ಪ್ರಖರ ಆಯುಧಗಳಿಂದ ಅದು ಜ್ವಾಜ್ವಲ್ಯಮಾನವಾಗಿ ಬೆಳಗಿತು. 'ಚಳುವಳಿ' ಎಂಬ ಮಾತು ಒಂದು ಹೊಸ ಆಯಾಮವನ್ನೇ ಅಲ್ಲಿ ಪಡೆಯಿತು.

ಪ್ರಪಂಚದ ಬೇರೆ ಬೇರೆ ರಾಷ್ಟ್ರಗಳಲ್ಲಿ ವಿವಿಧ ರಂಗಗಳಲ್ಲಿ ಚಳುವಳಿ ನಡೆಯುತ್ತಲೇ ಬಂದಿದೆ. ಜಾಗತಿಕ ಇತಿಹಾಸದ ಅತಿಸ್ಥೂಲವಾದ ಸಮೀಕ್ಷೆಯೂ ಕಾಲಕಾಲಕ್ಕೆ ನಡೆದ ಇಂತಹ ಚಳುವಳಿಗಳಿಂದ ವರ್ಣರಂಜಿತವಾಗಿ ಕಾಣುತ್ತದೆ. ರಾಜಕೀಯ ದಾಸ್ಯದಿಂದ ವಿಮುಕ್ತಿಗೊಳ್ಳಲು ಚಳುವಳಿಗಳು ನಡೆದಿವೆ. ಆರ್ಥಿಕ ವಿಷಮತೆಯನ್ನು ಪ್ರತಿಭಟಿಸಿ ಸಮಾನ ಹಂಚಿಕೆಗಾಗಿ ಚಳುವಳಿಗಳು ನಡೆದಿವೆ. ಅಂತೆಯೇ ಮಾನವನ ಹಕ್ಕುಬಾಧ್ಯತೆಗಳಿಗಾಗಿ, ಸಾಮಾಜಿಕ ಸಮಾನತೆಗಾಗಿ, ಅಧಿಕಾರಗಳಿಗಾಗಿ, ಜನಾಂಗಜಾಗೃತಿಗಾಗಿ, ಮತ ಧರ್ಮಗಳಿಗಾಗಿ ಚಳುವಳಿಗಳು ನಡೆಯುತ್ತಲೇ ಬಂದಿವೆ. ೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ನಡೆದ ಧಾರ್ಮಿಕ ಮತ್ತು ಸಾಮಾಜಿಕ ಚಳುವಳಿಯನ್ನು ಇವುಗಳ ಒಟ್ಟು ಹಿನ್ನೆಲೆಯಲ್ಲಿ ನೋಡಿದಾಗ, ಅದರ ವಿಶಿಷ್ಟತೆ, ವ್ಯಾಪ್ತಿ ಮತ್ತು ಪೂರ್ಣದೃಷ್ಟಿಗಳು ಮನದಟ್ಟಾಗುತ್ತವೆ.

ಆಧುನಿಕ ಚಳುವಳಿಗಳನ್ನು, ಅದರಲ್ಲೂ ಅದರ ಯಾವುದೋ ಒಂದು ಮುಖವನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಂಡ ಕೆಲವರ ಪ್ರಕಾರ ಅಂದು ಬಸವಣ್ಣನವರ ನೇತೃತ್ವದಲ್ಲಿ ನಡೆದದ್ದು ಅಂತಹ ಮಹತ್ತರವಾದ ಚಳುವಳಿಯೇನಲ್ಲ; ಕ್ರಾಂತಿ ಎನ್ನುವ ಮಾತಂತೂ ದೂರವೇ ಉಳಿಯಿತು. ದೇವರು-ಧರ್ಮ ಇತ್ಯಾದಿ 'ಕೆಲಸಕ್ಕೆ ಬಾರದ ವಿಷಯಗಳನ್ನು' ಜನತೆಯ ಮುಂದಿಟ್ಟು, ಬಸವಣ್ಣ ಆಗಬೇಕಾಗಿದ್ದ ಕ್ರಾಂತಿಯನ್ನು ತಪ್ಪಿಸಿ ಜನತೆಯನ್ನು ಅಡ್ಡಹಾದಿಗೆಳೆದ - ಎಂಬರ್ಥದ ಮಾತನ್ನಾಡಿ ತಮ್ಮ ಆ 'ವಿಚಾರಶೀಲತೆ'ಗೆ ತಾವೇ ಮೆಚ್ಚಿಕೊಳ್ಳುವವರೂ ಇದ್ದಾರೆ. ಆದರೆ ನಿಜವಾದ ವೈಚಾರಿಕತೆಗೆ, ಪೂರ್ಣದೃಷ್ಟಿಯ ಸ್ವತಂತ್ರ ವಿವೇಚನೆಗೆ ಆ ಶರಣಯುಗ ಹೇಗೆ ಕಾಣುತ್ತದೆ? ಅಂದು ಬಸವಣ್ಣ ಮತ್ತು ಆತನ ಸಂಗಡಿಗ ಶರಣರು ಕೈಕೊಂಡ ನಿರ್ವಹಿಸಿದ ಕಾರ್ಯವಿಧಾನ ಮತ್ತು ಸ್ವರೂಪಗಳು ವಿಫಲವೇ? ವ್ಯರ್ಥವೇ? ಆಗಬೇಕಾಗಿದ್ದ ಕ್ರಾಂತಿಯನ್ನು ತಪ್ಪಿಸಿದುವೇ? ಇದನ್ನು ಸಂಕ್ಷೇಪವಾಗಿ ಪರಿಶೀಲಿಸಬಹುದು.

ಇದಕ್ಕೆ ಮೊದಲು ಚಳುವಳಿ ಮತ್ತು ಅದರ ಪರಿಣಾಮ ವಾದ 'ಕ್ರಾಂತಿ' ಎಂದರೇನೆಂಬುದನ್ನು ಮೊದಲು ಮನಗಾಣಬೇಕು. ಸಾಮೂಹಿಕವಾಗಿ ಸಮಷ್ಟಿ ಮನಸ್ಸನ್ನು ಜಾಗ್ರತೆಗೊಳಿಸಿ ಕಾರ್ಯೋನ್ಮುಖವಾಗುವಂತೆ ಮಾಡಲು ಕೈಗೊಳ್ಳುವ ಬಹುಜನರ ಬಹುಮುಖ ಪ್ರಯತ್ನಗಳ ನಿರಂತರ ಸರಣಿಯೇ ಚಳುವಳಿ; ಅದರ ಫಲವಾಗಿ ಸಮಾಜದಲ್ಲಿ ಮೂಡುವ ತೀವ್ರವಾದ ಪ್ರತಿಕ್ರಿಯೆ ಮತ್ತು ಬದಲಾವಣೆಗಳನ್ನು 'ಕ್ರಾಂತಿ' ಎನ್ನಬಹುದು. ಅನೇಕ ವೇಳೆ 'ಕ್ರಾಂತಿ' ಎಂಬ ಮಾತು ರಕ್ತಪಾತದೊಡನೆ ಸಂಗತಗೊಂಡೇ ಬೆಳೆದು ಬಂದಿರುವುದು ಕಾಣುತ್ತದೆ. ಆದರೆ ಅದು ಕ್ರಾಂತಿಯ ಅನಿವಾರ್ಯ ವಾದ ಅಂಶವೇನಲ್ಲ. ಹಾಗೆ ನೋಡಿದರೆ ಒಂದರ್ಥದಲ್ಲಿ ರಕ್ತಕ್ರಾಂತಿ ಪುಕ್ಕಲುತನದ ಒಂದು ಮೆಟ್ಟಿಲು. ಎದುರಾಳಿಯನ್ನು ವೈಚಾರಿಕವಾಗಿ ಎದುರಿಸಿ ಅವನನ್ನು ಪರಿವರ್ತಿಸಲು ಅಸಾಧ್ಯವೆಂಬ ಹೆದರಿಕೆಯೇ ಅವನನ್ನು ಮುಗಿಸಿಬಿಡಬೇಕೆಂಬ ಪ್ರೇರೇಪಣೆಗೆ ಕಾರಣವಾಗುತ್ತದೆ. ಅದರಿಂದಲೇ ಗಾಂಧೀಜಿ ಹೇಳುತ್ತಿದ್ದರು, 'ಹಿಂಸೆ ಮೂಡಿಬರುವುದು ಭೀತಿಯಿಂದ ಅಥವಾ ಹೇಡಿತನದಿಂದ' ಎಂದು. ಕತ್ತಿ, ಬಂದೂಕ ಗಳನ್ನು ಹಿಡಿದ ಯೋಧನಿಗಿಂತ ಬರಿಗೈ ಬಂಟನಾದ ಸತ್ಯಾಗ್ರಹಿ ಹೆಚ್ಚು ಧೀರನೂ, ಸಮರ್ಥನೂ ಆಗಬೇಕಾಗುತ್ತದೆ. ಅದು ಕೇವಲ ದೈಹಿಕ ಶಕ್ತಿಯಲ್ಲ; ಆಂತರಿಕ ಶಕ್ತಿ, ಆತ್ಮಶಕ್ತಿ, ಆದ್ದರಿಂದ ವೈಚಾರಿಕ ಕ್ರಾಂತಿ, ರಕ್ತಕ್ರಾಂತಿಗಿಂತ ಮುಂದಿನ ಹೆಜ್ಜೆ.

೧೨ನೇ ಶತಮಾನದ ಶರಣರು ತಮ್ಮ ಕಾಲದ ಪರಿಸ್ಥಿತಿ ಗನುಗುಣವಾಗಿ ಅಂತಹ ಧೀರ ವೈಚಾರಿಕ ಆಂದೋಲನವನ್ನು ಕೈಕೊಂಡರು. ಅದರ ನೇತಾರನಾದ ಬಸವಣ್ಣ ಜೀವನವನ್ನು ಸಮಗ್ರಸ್ವರೂಪದಲ್ಲಿ ನೋಡಿದವನು. ಅಂದಿನ ಧರ್ಮ, ಪೂರ್ಣ ಜೀವನಕ್ಕೆ ಮಾರಕವಾಗಿ, ಶೋಷಣೆಯ ಮಾಧ್ಯಮವಾಗಿದ್ದುದನ್ನು ಕಂಡು ಕೆರಳಿದವನು, ಸಕ್ರಿಯವಾಗಿ ಅದನ್ನು ಪ್ರತಿಭಟಿಸಿದವನು. ಆದರೆ ಆ ಪ್ರತಿಭಟನೆ ರಾಜಕೀಯ ಸ್ವರೂಪದ್ದಾಗಿರಲಿಲ್ಲ. ರಾಜ್ಯದ ಭಂಡಾರಿಯಾಗಿ, ರಾಜಕೀಯದಲ್ಲಿ ಆತ ಪ್ರಧಾನ ಅಧಿಕಾರ ದಲ್ಲಿದ್ದರೂ ಆತ ತನ್ನ ಕ್ರಾಂತಿಗೆ ಅವಲಂಬಿಸಿದ ಮಾರ್ಗ ವೈಚಾರಿಕ ವಾದದ್ದು. ಜನಜಾಗೃತಿಯ ಕಷ್ಟಕರವಾದ ಮಾರ್ಗವನ್ನು ಶಿವಪರವಾದ ಆತನ ಮನಸ್ಸು ಎತ್ತಿಕೊಂಡಿತು.

ಜನರ ಮನಸ್ಸನ್ನು ಮುಟ್ಟಿ ಸದ್ವಿಚಾರಗಳಿಂದ ಅದನ್ನು ಉನ್ಮುಖಗೊಳಿಸುವುದು ಕತ್ತಿಯನ್ನು ಝಳಪಿಸುತ್ತ ಅಥವಾ ಗುಂಡನ್ನು ಹಾರಿಸುತ್ತಾ ನುಗ್ಗುವ ವಿನಾಶಾತ್ಮಕವಾದ ಮಾರ್ಗವಲ್ಲ. ವಿಚಾರದ ಪ್ರಭೆಯಿಂದ ಮನಸ್ಸಿನ ಕತ್ತಲನ್ನು ಕಳೆಯುವುದು, ನಿಧಾನವಾಗಿ ಬೆಳೆಯುವ ಸೃಷ್ಟ್ಯಾತ್ಮಕಕ್ರಾಂತಿ (Creative Revolution) ಮಾರ್ಗ. ಅದಕ್ಕಾಗಿ ಬಸವಣ್ಣ ಕೈಗೆತ್ತಿಕೊಂಡದ್ದು ಖಡ್ಗವನ್ನಲ್ಲ; ವಚನಗಳನ್ನು. ಕನ್ನಡದಲ್ಲಿ ಆಗಲೇ ವಚನ ಪ್ರಕಾರ ದಾಸಿಮಯ್ಯಾದಿಗಳಿಂದ ಉಗಮಗೊಂಡಿತ್ತು. ನೇರವಾದ ಭಾಷೆಯಲ್ಲಿ ಜನತೆಯನ್ನು ಮುಟ್ಟಿ ಜಾಗೃತಗೊಳಿಸುವ ಸಶಕ್ತ ಮಾಧ್ಯಮವನ್ನು ಬಸವಣ್ಣ ಅವುಗಳಲ್ಲಿ ಕಂಡುಕೊಂಡ. ಲೇಖನಿ ಕತ್ತಿಗಿಂತ ಬಲಶಾಲಿಯಾದದ್ದು, ಹರಿತವಾದದ್ದು ಎಂಬುದನ್ನು ಆ ಮೂಲಕ ತೋರಿಸಲು ನಿರ್ಧರಿಸಿದ. ಆತನ ಜೀವಿತದ ಕೆಲವೇ ವರ್ಷಗಳಲ್ಲಿ ಅದು ತನ್ನ ಸಾಧ್ಯತೆಯನ್ನೂ ಮೀರಿ ಆ ಸತ್ಯವನ್ನು ಸಾಬೀತುಗೊಳಿಸಿತು. ಪುರಾಣದಲ್ಲಿ ರಕ್ತಬೀಜಾಸುರನ ಕಥೆಯೊಂದುಂಟು. ಅದರ ಪ್ರಕಾರ ಆತನ ದೇಹದಿಂದ ಭೂಮಿಗೆ ಬಿದ್ದ ಒಂದೊಂದು ಹನಿ ರಕ್ತಕ್ಕೂ ಸಹಸ್ರಾರು ರಕ್ಕಸರು ಉದ್ಭವವಾಗುತ್ತಿದ್ದರು. ಅದನ್ನು ಇಲ್ಲಿ ಸತ್‌ಪರವಾಗಿ ಅನ್ವಯಿಸಬಹುದು. ಒಂದು ವಚನಕ್ಕೆ ಸಾವಿರ ವಚನಗಳು ಹುಟ್ಟಿದುವು. ಜೀವನದ ಎಲ್ಲ ಸ್ತರಗಳಿಂದಲೂ ಜಾಗ್ರತಗೊಂಡ ಜನ ವಚನಗಳನ್ನು ರಚಿಸಿದರು. ಅನುಭವ ಮಂಟಪದಲ್ಲಿ ವಚನಗಳ ಮಸೆದಾಟದಿಂದ ಕ್ರಾಂತಿಯ ಕಿಡಿಗಳು ಸಿಡಿದುವು. ಅದನ್ನು ನಾಡಿನ ಉದ್ದಗಲಕ್ಕೂ ಹರಡುವುದಕ್ಕೆ ವಚನಗಳೇ ಮಾಧ್ಯಮಗಳಾದುವು. ಈ ಅರ್ಥದಲ್ಲಿ ಶರಣರ ಆಂದೋಲನವನ್ನು 'ವಚನ ಚಳುವಳಿ' ಎಂದು ಕರೆಯುವುದು ಸಮಂಜಸವಾಗಿದೆ.

ಬಸವಣ್ಣನ ಮುಂದಿದ್ದ ಸಮಸ್ಯೆ ಸರಳವಾಗಿರಲಿಲ್ಲ; ತುಂಬಾ ಸಂಕೀರ್ಣವಾಗಿತ್ತು. ಒಂದುಕಡೆಯಲ್ಲಿ ಮಾನವತೆಯೆಲ್ಲಾ, ಅಷ್ಟೇ ಏಕೆ ಇಡೀ ಜೀವರಾಶಿಯೇ, ದೈವ ಸ್ವರೂಪವೆಂಬ ವಿಶ್ವವ್ಯಾಪಕವಾದ ದೊಡ್ಡ ಆದರ್ಶ; ಉಪನಿಷತ್ತು ಗೀತೆ ಮೊದಲಾದ ಧಾರ್ಮಿಕ ಗ್ರಂಥಗಳಲ್ಲಿ, ಇನ್ನೊಂದು ಕಡೆ ಮಾನವತೆ ನಾಚಿಕೊಳ್ಳುವಷ್ಟು ಕುಟಿಲ ಕ್ಷುದ್ರತೆ ಕುಹಕಗಳು ಧರ್ಮದ ಹೆಸರಿನಲ್ಲಿ ಬೆಳೆದು, ಸಮಾಜವನ್ನು ಹೋಳು ಹೋಳು ಮಾಡಿದ್ದುವು. ವರ್ಣಗಳೂ, ಜಾತಿಗಳೂ ಧಾರ್ಮಿಕ ಮುದ್ರೆಯನ್ನು ಪಡೆದು ಮೀರಲಾಗದ ತಾರತಮ್ಯವನ್ನೂ, ಮೇಲು-ಕೀಳುಗಳನ್ನೂ ಸಮಾಜದಲ್ಲಿ ಸೃಷ್ಟಿಸಿದ್ದುವು. ಎಲ್ಲೆಲ್ಲೂ ವಿಷಮತೆ ತಾಂಡವವಾಡುತ್ತಿತ್ತು. ಧರ್ಮದ ಅನಿಷ್ಟ ದುಷ್ಪರಿಣಾಮಗಳು ಸಮಾಜದ ಕೆಳವರ್ಗವನ್ನು ತಲೆಯೆತ್ತದಂತೆ ಮೆಟ್ಟಿ ಅದುಮಿಟ್ಟಿದ್ದುವು. ತಲೆಯೆತ್ತಿ ಮೆರೆಯುವ ಕೆಲವರ ಸುಖಭೋಗಗಳಿಗಾಗಿ ದುಡಿಯುವುದೇ ಅವರ ಕರ್ಮವಾಗಿತ್ತು. 'ಕರ್ಮಸಿದ್ಧಾಂತ'ವನ್ನು ಅವರ ರಕ್ತದ ಕಣಕಣಗಳಲ್ಲಿಯೂ ತೂರಿಸಿ, ಆ ವ್ಯವಸ್ಥೆಯನ್ನು ಶಾಶ್ವತಗೊಳಿಸಲಾಗಿತ್ತು. ಅದಕ್ಕೆ ತಕ್ಕಹಾಗೆ ಧಾರ್ಮಿಕ, ಸಾಮಾಜಿಕ ಮೌಲ್ಯಗಳನ್ನೂ ರೂಪಿಸಲಾಗಿತ್ತು. ಇಂತಹ ವ್ಯವಸ್ಥೆಯ ವಿರುದ್ಧ ಪ್ರಬಲವಾಗಿ ಪ್ರತಿಭಟನೆಯ ಧ್ವನಿಯೆತ್ತಿದುದು ಮಾತ್ರವಲ್ಲದೆ ಅದನ್ನು ಒಡೆಯಲು ಉದ್ಯುಕ್ತನಾದವನು ಬಸವಣ್ಣ. ಅವನೆತ್ತಿದ ಕೊರಳು ಕ್ರಮೇಣ ಜನಸಾಮಾನ್ಯರಲ್ಲಿ ಮಾರ್ದನಿಗೊಂಡು, ಹತ್ತುಮಡಿ ನೂರುಮಡಿಯಾಗಿ ಅವರ ಉದ್ಧಾರದ ಪಾಂಚಜನ್ಯವಾಗಿ ಮೊಳಗಿತು. ಕರ್ನಾಟಕದಿಂದ ಮಾತ್ರವಲ್ಲ ಇಡೀ ಭಾರತದ ನಾನಾ ಭಾಗಗಳಿಂದ ಸಾಧಕರನ್ನು ಆಕರ್ಷಿಸಿತು. ಇತಿಹಾಸದಲ್ಲೇ ಅಪೂರ್ವವಾದ ಮಹಾ ಬಂಡಾಯವಾಗಿ ಪರಿಣಮಿಸಿತು.

ಬಸವಣ್ಣನ ಮಹತ್ವ ಇರುವುದು ತತ್ವಗಳ ಆವಿಷ್ಕಾರಕ್ಕಿಂತ ಹೆಚ್ಚಾಗಿ ಆಗಲೇ ಸಿದ್ಧವಾಗಿದ್ದ ತತ್ವಗಳನ್ನು ಉಜ್ಜಿ, ಅಂದಿನ ಜೀವನಕ್ಕೆ ಅವನ್ನು ಅನ್ವಯಿಸಿ ಕ್ರಿಯಾತ್ಮಕವಾಗಿ ಕಾರ್ಯಗತಗೊಳಿಸಿದುದರಲ್ಲಿ. ಯಾವುದೇ ಕ್ರಾಂತಿಕಾರಕ ಚಳುವಳಿಯಲ್ಲಿ ನಾವು ಮುಖ್ಯವಾಗಿ ಕಾಣುವುದು ಇದನ್ನೇ. ಸ್ವಾತಂತ್ರ್ಯದ ಹೋರಾಟದಲ್ಲಿ ಗಾಂಧೀಜಿ ಪ್ರಯೋಗಿಸಿದ ಸತ್ಯ, ಅಹಿಂಸೆಗಳು ಹೊಸವೇನಲ್ಲ. ಆದರೆ ಅವುಗಳಿಂದ ಸತ್ಯಾಗ್ರಹ ಅಸ್ತ್ರವನ್ನು ಸಿದ್ಧಗೊಳಿಸಿ, ಸ್ವಾತಂತ್ರ್ಯ ಚಳುವಳಿಗೆ ಆ ಮೂಲಕ ಇಡೀ ಮಾನವ ಜೀವನದ ಹೋರಾಟಕ್ಕೆ ಹೊಸ ಆಯಾಮವನ್ನಿತ್ತುದು ಗಾಂಧೀಜಿಯ ಸಾಧನೆ. ಇನ್ನೂ ಒಂದು ಒಳ್ಳೆಯ ಉದಾಹರಣೆ ಹೇಳಬಹುದಾದರೆ ಲೆನಿನ್ ಅವರ ಕಾರ್ಯಸಾಧನೆಯನ್ನು ಜ್ಞಾಪಿಸಿಕೊಳ್ಳಬಹುದು.

ಲೆನಿನ್ ಬರುವ ವೇಳೆಗಾಗಲೇ ಮಾರ್ಕ್ಸ್, ಆರ್ಥಿಕತೆಯ ಮೇಲೆ ಆಧಾರಿತವಾದ ತನ್ನ ಸಿದ್ಧಾಂತವನ್ನು ಸಮರ್ಥವಾಗಿ ಪ್ರತಿಪಾದಿಸಿದ್ದ. ಆದರೆ ಅದನ್ನು ಕ್ರಾಂತಿಕಾರೀ ಹೋರಾಟದ ರಚನಾತ್ಮಕ ಕಾರ್ಯಗಳಿಗೆ ಅನ್ವಯಿಸಿ, ಆ ಮೂಲಕ ಸಾಮಾಜಿಕ ಬದಲಾವಣೆಯನ್ನುಂಟು ಮಾಡುವ ಚಳುವಳಿ ನಡೆದಿರಲಿಲ್ಲ. ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಜನರನ್ನು ಹೋರಾಟದ ಶಕ್ತಿಯನ್ನಾಗಿ ಬೆಸೆದು, ಒಂದುಗೂಡಿಸಬಲ್ಲ ಸಂಘಟನೆಯ ಅಗತ್ಯವಿತ್ತು. ಆ ಮಹಾಕಾರ್ಯವನ್ನು ಸಾಧಿಸಿದವರು ಲೆನಿನ್. ಮಾರ್ಕ್ಸ್‌ಸಿದ್ಧಾಂತವನ್ನು ಕ್ರಾಂತಿಕಾರೀ ಹೋರಾಟದ ಆಚರಣೆಯೊಡನೆ ಏಕತ್ರಗೊಳಿಸಿ, ಅಂದಿನ ರಷ್ಯದ ವಾಸ್ತವ ಪರಿಸ್ಥಿತಿಗೆ ತಕ್ಕಂತೆ ಅನ್ವಯಿಸುವ ಶಕ್ತಿಯನ್ನು ಲೆನಿನ್ ಬೃಹತ್ ಪ್ರಮಾಣದಲ್ಲಿ ಪ್ರಕಟಪಡಿಸಿದರು. ಇದೇ ಕೆಲಸವನ್ನು ಬೇರೆ ತಾತ್ವಿಕ ಹಿನ್ನೆಲೆಯಲ್ಲಿ, ಬೇರೆ ಜೀವನಸಿದ್ಧಾಂತದ ಪರಿಸರದಲ್ಲಿ ಭಿನ್ನವಾದ ನಿಲುವಿನಿಂದ ಸಾಧಿಸಿದವರು ಬಸವಣ್ಣನವರು. ಆದರೆ ಒಂದು ಸಿದ್ಧಾಂತವನ್ನು ಸಮಷ್ಟಿ ಜಾಗೃತಿಯ ಪರಿಣಾಮಕಾರೀ ಕೈದುವನ್ನಾಗಿ ಪರಿವರ್ತಿಸಿ ಚಲನಶೀಲ ಆಂದೋಲನವನ್ನಾಗಿಸುವ ಸಾಹಸ ಈ ಇಬ್ಬರಲ್ಲೂ ಗೋಚರಿಸುತ್ತದೆ.

ನಮ್ಮ ಆಧುನಿಕರಲ್ಲಿ ಕೆಲವರು ಇನ್ನೂ ಹೆಚ್ಚಿನ ಸಾದೃಶ್ಯವನ್ನು ಕಂಡುಕೊಳ್ಳಲು ಬಯಸುತ್ತಾರೆ. ಮಾರ್ಕ್ಸ್‌ವಾದದಿಂದ ಆಕರ್ಷಿತರಾದ ಅವರು ಅಲ್ಲಿ ಆದದ್ದನ್ನೆಲ್ಲಾ ಬಸವಣ್ಣ ಮಾಡಬೇಕಾಗಿತ್ತೆಂದು ನಿರೀಕ್ಷಿಸಿ, ಆ ದೃಷ್ಟಿಯಿಂದ ಅದನ್ನು ನೋಡತೊಡಗುತ್ತಾರೆ. ಆಗ ಬಸವಣ್ಣನ ಮೇಲಿನ ಅಭಿಮಾನ ಹೆಚ್ಚಾದರೆ ಆತನ ತಲೆಗೆ ಇಲ್ಲದುದನ್ನೆಲ್ಲಾ ಕಟ್ಟಿ, ಆ ಕ್ರಾಂತಿಗೆ ಇದು ಸಮಾನ ಎಂಬ ವ್ಯರ್ಥವಾದಕ್ಕೆ ಕೈಹಾಕಬೇಕಾಗುತ್ತದೆ; ಇಲ್ಲವೆ ಬಸವಣ್ಣ ಕೆಲವು ಹುಸಿಮೌಲ್ಯಗಳನ್ನು ಒಪ್ಪಿಕೊಂಡು ಕ್ರಾಂತಿಯನ್ನು ವಿಫಲಗೊಳಿಸಿದ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ವಾಸ್ತವವಾಗಿ ಇದು ಸತ್ಯ ಇವೆರಡರ ಆಚೆಯಿದೆ.

ಮಾರ್ಕ್ಸ್‌ವಾದ ಮತ್ತು ಬಸವತತ್ವಗಳಲ್ಲಿ ಇರುವ ಸಮಾನ ಅಂಶವೆಂದರೆ ಮಾನವತಾವಾದ. ಮಾರ್ಕ್ಸ್ ಮತ್ತು ಬಸವ ಇಬ್ಬರೂ ಮಾನವನ ದುಃಖಕ್ಕಾಗಿ ಮರುಗಿ, ಅದನ್ನು ತೊಡೆದುಹಾಕುವುದಕ್ಕಾಗಿ ಕಂಕಣ ಕಟ್ಟಿದವರು. ಆದರೆ ಮಾರ್ಗಗಳು ಮಾತ್ರ ಭಿನ್ನ. ಮಾರ್ಕ್ಸ್ ಹೇಳುವುದು ಆರ್ಥಿಕ ವಿಷಮತೆಯೇ ಮಾನವನ ದುಃಖಕ್ಕೆಲ್ಲಾ ಮೂಲ. ಶೋಷಣೆಯ ಮಾಧ್ಯಮಗಳನ್ನು ತೆಗೆದುಹಾಕಿದರೆ, ಉತ್ಪಾದನೆಯ ಮೂಲಗಳನ್ನು ನಿಯಂತ್ರಿಸಿ, ಸಂಪತ್ತಿನ ಹಂಚಿಕೆಯನ್ನು ಸಾಮಾಜಿಕ ನ್ಯಾಯದ ಮೇಲೆ ವ್ಯವಸ್ಥೆಗೊಳಿಸಿದರೆ ಆದರ್ಶ ನವಸಮಾಜ ನಿರ್ಮಾಣ ಸಾಧ್ಯವಾಗುತ್ತದೆ. "*ಒಂದು ದೇಶದ ಸಾಮಾಜಿಕ ಸಂಘ-ಸಂಸ್ಥೆಗಳು ಆ ದೇಶದ ಆರ್ಥಿಕ ಸಂಗತಿಗಳಿಂದ ರೂಪಿತವಾಗಿರುತ್ತವೆ*" - ಎಂದು ಸಮಾಜದ ಎಲ್ಲ ವ್ಯವಸ್ಥೆಯನ್ನೂ ಆರ್ಥಿಕ ತಳಹದಿಯ ಮೇಲೆ ನಿಲ್ಲಿಸುತ್ತಾನೆ ಮಾರ್ಕ್ಸ್.

ಸಾಮಾಜಿಕ ಸಮಾನತೆಯಲ್ಲಿ ಆರ್ಥಿಕತೆಯ ಮಹತ್ವವನ್ನು ಅಲ್ಲಗಲೆಯುವಂತಿಲ್ಲ ನಿಜ. ಆದರೆ ಅದೊಂದೇ ಎಲ್ಲವನ್ನೂ ನಿರ್ಧರಿಸುವ, ಎಲ್ಲ ಸಮಸ್ಯೆಗಳನ್ನೂ ಪರಿಹರಿಸುವ ಏಕೈಕ ಸಾಧನವೆನ್ನುವುದು ಅದರ ಮೇಲೆ ಸಲ್ಲದ ಅತಿಯಾದ ಒತ್ತನ್ನು ಕೊಟ್ಟಂತಾಗುತ್ತದೆ ಎಂಬುದು ಭಾರತೀಯ ದೃಷ್ಟಿ. ವರ್ಗರಹಿತ ಆರ್ಥಿಕ ಸಮಾನತೆಯನ್ನು ಸಾಧಿಸಿದ ಮಾತ್ರಕ್ಕೆ ಅಲ್ಲಿನ ಜನರೆಲ್ಲಾ ಒಂದೇ ತೆರದವರಾಗಿ ಶಾಂತಿ ನೆಲೆಸಿಬಿಡುವುದಿಲ್ಲ. ರಷ್ಯಾದ ಸಮಾಜವನ್ನೇ ತೆಗೆದುಕೊಂಡರೂ ಅಲ್ಲಿ ಎಲ್ಲ ವರ್ಗದ ಜನರಲ್ಲಿ ಭ್ರಾತೃಭಾವ ಏರ್ಪಟ್ಟು, ಸಮಸ್ಯೆಗಳೆಲ್ಲಾ ಸಂಪೂರ್ಣವಾಗಿ ಪರಿಹಾರವಾಗಿಲ್ಲ. ಸಾಮಾಜಿಕ ಅಡ್ಡುಗಟ್ಟುಗಳು ಇನ್ನೂ ಇವೆ. ಆ ಸಮತಾವಾದವನ್ನು ಅಂಗೀಕರಿಸಿರುವ ರಾಷ್ಟ್ರಗಳಲ್ಲೇ ಭಿನ್ನಾಭಿಪ್ರಾಯವಿದ್ದು, ರಾಗ-ದ್ವೇಷಗಳು ಹೊಗೆಯಾಡುತ್ತಿವೆ. ಏಕೆ ಹೀಗೆ?

ಏಕೆಂದರೆ ಮನುಷ್ಯ ಕೇವಲ ಆರ್ಥಿಕ ಜೀವಿಯಲ್ಲ. ಆತನ ಇತರ ಶಕ್ತಿಗಳ ಕಡೆಗೂ ದೃಷ್ಟಿ ಹರಿಸಬೇಕಾಗುತ್ತದೆ. ಆತನಿಗೆ ಹೊರಗಡೆ ಒಂದು ದೇಹ ಇರುವಂತೆ ಅದರ ಒಳಗಡೆ ಒಂದು ಮನಸ್ಸಿದೆ. ಬಾಹ್ಯ ಸನ್ನಿವೇಶದಲ್ಲಿ ಬದಲಾವಣೆ ಮಾಡುವಷ್ಟರಿಂದಲೇ ಆತನ ಸ್ವಭಾವದ ರೂಕ್ಷತೆಯನ್ನೂ, ಮೊಂಡುತನವನ್ನೂ ತಿದ್ದುವುದು ಸಾಧ್ಯವಿಲ್ಲ. ಆಂತರಿಕ ಹಸಿವೆಯೂ ಆಹಾರವನ್ನು ಬಯಸುತ್ತದೆ. ಒಂದಲ್ಲ ಒಂದು ರೀತಿಯಲ್ಲಿ ಅಂತರ್‌ನಿರೀಕ್ಷಣೆಯನ್ನು ಆತ ಮಾಡಿಕೊಳ್ಳಲೇಬೇಕಾಗುತ್ತದೆ. ಅದಕ್ಕೇನನ್ನು ಕೊಡಬೇಕೆಂದು ತಡಕಾಡಲೇ ಬೇಕಾಗುತ್ತದೆ. ಪೂರ್ಣ ಪ್ರಾಪಂಚಿಕವಾದ ಮಾರ್ಕ್ಸ್‌ವಾದ ಅದಕ್ಕೆ ಉತ್ತರವನ್ನು ಕಂಡುಕೊಳ್ಳಲಾರದು. ಧರ್ಮಗಳು ಶೋಷಣೆಗೆ ಕಾರಣವಾಗಿ ದೈವಿಕವಾದ ಅಧಿಕಾರದ ಸೋಗಿನಿಂದ ಮಾನವತೆಯನ್ನು ಒಡೆದು ಆಳುವ ಒಂದು ಅತಿರೇಕಕ್ಕೆ ಹೋದರೆ, ನಾಸ್ತಿಕ್ಯ ಭೌತಿಕ ಸುಖದಲ್ಲಿಯೇ ಎಲ್ಲವನ್ನೂ ಹುಡುಕುವ ಇನ್ನೊಂದು ಅತಿರೇಕಕ್ಕೆ ಹೋಯಿತು. ಬಹುಶಃ ಪೂರ್ಣಸತ್ಯವನ್ನು ಕಂಡುಕೊಳ್ಳುವ ಯಾವುದೇ ಕ್ರಾಂತಿ ಈ ಎರಡನ್ನೂ ಶೋಧಿಸಿ ಮೂಲಭೂತ ಮೌಲ್ಯಗಳನ್ನ ಸಾಮಾಜಿಕ ಪರಿಸರಕ್ಕೆ ಅಳವಡಿಸಿಕೊಂಡು, ಮಾನವತೆಯ ನಿರಂತರ ಹೋರಾಟದ ಅನ್ವೇಷಣೆಗೆ ಖಚಿತವಾದ ದಿಕ್ಕನ್ನು ಕಂಡುಕೊಳ್ಳುತ್ತದೆ. ಬಸವಣ್ಣ ಸಾಮಾಜಿಕ ವಿಜ್ಞಾನಿಯಾಗಿ ಧಾರ್ಮಿಕ ಪ್ರವಾದಿಯಾಗಿ ಮಾಡಿದ್ದು ಇದನ್ನೇ.

ಮಾನವೀಯತೆ (Humanism) ಬಸವಣ್ಣನವರ ಆಂದೋಲನದ ತಳಹದಿ. ಆದರೆ ಆ ತಳದಿಯಲ್ಲೇ ಅದು ನಿಲ್ಲುವುದಿಲ್ಲ. ಅದರ ಮೇಲೆ ಮಾನವನ ಸರ್ವಾಂಗೀಣ ಉದ್ಧಾರದ ಭವ್ಯ ಸೌಧವನ್ನು ಅದು ನಿರ್ಮಿಸುತ್ತದೆ. ಮಾನವೀಯತೆಯ ಸಿದ್ಧಾಂತಕ್ಕೆ ಮಾನವನ ಒಳಿತಿಗಾಗಿ ದುಡಿಯುವುದು, ಮಾನವನ ಉದ್ಧಾರ - ಇವುಗಳೇ ಪರಮಧರ್ಮ. ಆದರೆ ಮಾನವನ 'ಒಳಿತು' ಯಾವುದು? ಆತನ 'ಉದ್ಧಾರ' ಎಂದರೇನು? - ಎಂಬ ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ಅನ್ನ, ಬಟ್ಟೆ ಮತ್ತು ಇತರ ಭೌತಿಕ ಅವಶ್ಯಕತೆಗಳ ವಿತರಣೆಯ ವ್ಯವಸ್ಥೆ ಬಹಳ ಮುಖ್ಯ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದರೆ ಅದೇ ಕೊನೆಯಾಗಲಾರದು. ಈ ಬಾಹ್ಯ ಪರಿಸರಗಳನ್ನಷ್ಟೇ ಸರಿಪಡಿಸಿದ ಮಾತ್ರಕ್ಕೆ ಆತನ ಪೂರ್ಣವಿಕಾಸರಾಗುತ್ತದೆಂಬುದನ್ನು ಒಪ್ಪುವುದಕ್ಕಾಗುವುದಿಲ್ಲ. ಈ ಪೂರ್ಣವಿಕಾಸದ ಆವಿಷ್ಕಾರ ಹೇಗೆಂಬ ಪ್ರಶ್ನೆ ಬಂದಾಗ ಮತಧರ್ಮ ಅನಿವಾರ್ಯವಾಗುತ್ತದೆ.

ಮತಧರ್ಮದಿಂದ ಸಾಕಷ್ಟು ಕೆಡುಕೂ ಆಗಿದೆ ಎಂಬುದನ್ನು ಒಪ್ಪಬೇಕು. ಅದು ಸ್ವಾರ್ಥದ ಮುಖವಾಡವಾಗಿ ಒಂದುಕಡೆ ಶೋಷಣೆಯ ಮಾಧ್ಯಮವಾಗಿದ್ದರೆ, ಇನ್ನೊಂದು ಕಡೆ ಭಾವುಕರ ಅಂಧಶ್ರದ್ಧೆಗೆ ನೀರು-ಗೊಬ್ಬರವಾಗಿ ವಿವೇಚನೆಯನ್ನು ಕುಗ್ಗಿಸುವ ಆವೇಶವಲ್ಲದೆ ಮತ್ತನ್ನು ಬರಿಸುವ ಅಫೀಮಿನಂತೆಯೂ ಆಗಿ ಪರಿಣಮಿಸಿರುವುದನ್ನು ಇತಿಹಾಸದ ಉದ್ದಕ್ಕೂ ಕಂಡುಕೊಳ್ಳಬಹುದು. ಬಸವಣ್ಣನವರ ಕಾಲದಲ್ಲಿ ಧರ್ಮದ ಈ ಗುಣಗಳೇ ಪ್ರಮುಖವಾಗಿ ವಿಜೃಂಭಿಸುತ್ತಿದ್ದುವು. ಬಸವಣ್ಣ ಅವುಗಳನ್ನು ಕಟುವಾಗಿ ಖಂಡಿಸಿದ; ಅವುಗಳ ವಿರುದ್ಧ ಸಿಡಿದು ನಿಂತ. ಯಾವ ಮುಲಾಜೂ ಇಲ್ಲದೆ ಅವುಗಳನ್ನು ಕತ್ತರಿಸಿಹಾಕುವ ಶಸ್ತ್ರಚಿಕಿತ್ಸೆಯನ್ನು ಕೈಕೊಂಡ. ಅನಗತ್ಯವಾದ ಭಾಗಗಳನ್ನು ಕತ್ತರಿಸಿ, ಉಳಿದುವಕ್ಕೆ ಎಚ್ಚರಿಕೆಯಿಂದ ಹೊಲಿಗೆ ಹಾಕಿ ಆರೋಗ್ಯಕರವಾದ ಬೆಳವಣಿಗೆಗೆ ಕಾರಣವಾಗಬೇಕಾಗುತ್ತದೆ ಶಸ್ತ್ರಚಿಕಿತ್ಸೆ. ಎಲ್ಲವನ್ನೂ ಕತ್ತರಿಸಿ ಕೊಚ್ಚಿಹಾಕುತ್ತಾ ಹೋಗುವುದು ಶಸ್ತ್ರ ಚಿಕಿತ್ಸೆಯಲ್ಲ; ಕೊಲೆ.

ಸಮಾಜಪುರುಷನ ವಿಚಾರದಲ್ಲಿಯೂ ಕ್ರಾಂತಿಕಾರರು ಈ ಮಾತನ್ನು ಗಮನಿಸಬೇಕು.

ಮನುಷ್ಯ ಶತಶತಮಾನಗಳ ಅನುಭವದಿಂದ ಕೆಲವು ಮೌಲ್ಯಗಳನ್ನು ಬೆಳೆಸಿಕೊಂಡು ಬಂದಿದ್ದಾನೆ. ಇತರ ಪ್ರಾಣಿಗಳಂತೆಯೇ ಜೀವನ ನಡೆಸುತ್ತಿದ್ದ ಆದಿಮಾನವ ಇಂದು ಅವುಗಳಿಂದ ಬೇರೆಯಾಗಿ ನಾಗರಿಕನಾಗಿದ್ದಾನೆ. ತನ್ನ ಅಂತರಿಂದ್ರಿಯಗಳ ಪ್ರಭಾವದಿಂದ ಸಂಸ್ಕೃತಿಯನ್ನು ಬೆಳೆಸಿಕೊಂಡಿದ್ದಾನೆ. ಅದರ ಜೊತೆಗೆ ಕಳೆಯೂ ಸೇರುತ್ತಾ ಬಂದಿದೆ ಎಂಬುದು ನಿಜ. ಬೆಳೆಯೊಡನೆ ಕಳೆಯೂ ಸಮೃದ್ಧವಾಗಿದೆ. ಆದರೆ ಕಳೆ ಬೆಳೆಗಳನ್ನು ಗುರುತಿಸುವ ವಿವೇಚನೆಯೂ ಮಾನವನ ಒಂದು ವಿಶಿಷ್ಟ ಶಕ್ತಿ. ಆ ಶಕ್ತಿಯನ್ನು ಬೆಳೆಸಿಕೊಂಡು, ಬಳಸಿಕೊಂಡು, ಆತನ ಸಾಮಾಜಿಕ ಕ್ರಾಂತಿ ರೂಪುಗೊಳ್ಳಬೇಕಾಗುತ್ತದೆ.

ಬ್ರಾಹ್ಮಣ್ಯದ ಕರ್ಮಠತನವನ್ನೂ, ಕರ್ಮಸಿದ್ಧಾಂತವನ್ನೂ, ವರ್ಣವ್ಯವಸ್ಥೆಯನ್ನೂ, ಯಜ್ಞ-ಯಾಗಾದಿಗಳನ್ನೂ, ಅಂಧಶ್ರದ್ಧೆಗಳನ್ನೂ, ಮೇಲು-ಕೀಳುಗಳನ್ನೂ ಅದರಲ್ಲೂ ಅಸ್ಪೃಶ್ಯತೆಯನ್ನು ತೀವ್ರವಾಗಿ ತಿರಸ್ಕರಿಸಿದ ಬಸವಣ್ಣ ಉಪನಿಷತ್ತುಗಳ ದಿವ್ಯದರ್ಶನವನ್ನೂ, ಆಗಮಗಳ ಶಿವತತ್ತ್ವವನ್ನೂ, ಸರ್ವಸಮಾನತೆಯ ಸಾಧನವಾದ ಇಷ್ಟಲಿಂಗೋಪಾಸನೆಯನ್ನೂ, ಆಂತರಿಕ ವಿಕಾಸದ ಷಟ್‌ಸ್ಥಲ ಮಾರ್ಗವನ್ನೂ ಒಪ್ಪಿಕೊಂಡಿದ್ದಕ್ಕೆ ಕಾರಣ ಈ ವಿವೇಚನೆಯೇ. ಈ ವಿಚಾರದಲ್ಲಿ ಬಸವಣ್ಣನದು ಖಚಿತವಾದ ನಿಲವು. ಆತನ ವಿವೇಚನೆ ಮೌಲ್ಯಗಳನ್ನು ಅಗ್ನಿಪರೀಕ್ಷೆಗೆ ಗುರಿಪಡಿಸಿ, ಕಾಳಿಕೆಗಳನ್ನು ಕಳೆದುಕೊಂಡು ಬಂದವುಗಳನ್ನು ಮಾತ್ರ ಸ್ವೀಕರಿಸಿತು. ಇಹ-ಪರಗಳೆರಡರ ಮೌಲ್ಯಗಳನ್ನೂ ಶೋಧಿಸಿತು. ಆದ್ದರಿಂದಲೇ ಅದು ಇಹವನ್ನು ತಿರಸ್ಕರಿಸದೆ ಆರ್ಥಿಕ ಸಮಾನತೆಯ ಆಧಾರದ ಮೇಲೆ ರೂಪಿತವಾದ ಧರ್ಮವಾಯಿತು. ಪ್ರತಿಯೊಬ್ಬನೂ ದೇಹಶ್ರಮದಿಂದ ದುಡಿದು, ಬಂದುದನ್ನು ಹಂಚಿ ತಿನ್ನುವುದೇ ಈ ಧರ್ಮದ ಪ್ರಾಥಮಿಕ ಅವಶ್ಯಕತೆಯಾಯಿತು. ಇದನ್ನು 'ಕಾಯಕ' ಎಂದು ಕರೆದರು. ಅದರ ಸುತ್ತ ಒಂದು ತಾತ್ವಿಕ ಪರಿಧಿಯೇ ನಿರ್ಮಿತವಾಯಿತು. ನೂರಾರು ಶರಣರ ಆಚರಣೆಯಿಂದ ಅದು ಘಟ್ಟಿಗೊಂಡಿತು.

ಅಂದಿನ ಚಳುವಳಿ ವಚನ ರಚನೆಗೆ ಸೀಮಿತವಾಗಿ ಬೌದ್ಧಿಕವಾಗಿ ಉಳಿಯಲಿಲ್ಲ. ವಚನಗಳಲ್ಲಿ ಮೂಡಿದ ತತ್ತ್ವದರ್ಶನ ಜನಸಾಮಾನ್ಯರನ್ನು ಮುಟ್ಟಿ ವ್ಯಾಪಕವಾಗಿ ಬೆಳೆಯಿತು. *''ಅಂದಂದಿನ ಕಾಯಕ ಅಂದಂದು ಮಾಡಿ ಶುದ್ಧರಾಗಬೇಕು''* - ಎಂಬ ಮಾತು ದಿನನಿತ್ಯದ ಆಚರಣೆಯಲ್ಲಿ ಅಳವಟ್ಟಿತು. *''ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗೆ ಉಂಟೇ ಅಯ್ಯ?''*; *''ಈಸಕ್ಕಿಯ ಆಸೆ ನಿಮಗೇಕೆ ಈಶ್ವರನೊಪ್ಪ''* ಎಂದು ಹೆಚ್ಚಾಗಿ ತಂದ ಅಕ್ಕಿಯನ್ನು ಹಿಂದಕ್ಕೆ ಸುರಿದ ಲಕ್ಕಮ್ಮನ ನಿಷ್ಠೆಯನ್ನು ಕಂಡಾಗ ಈ ಚಳುವಳಿಯಿಂದಾದ ಕಾಯಕದ ಜಾಗೃತಿ ಮನವರಿಕೆಯಾಗುತ್ತದೆ. ಇಂತಹ ನೂರಾರು ಜನ ಶರಣ-ಶರಣೆಯರು ತಮ್ಮ ತಮ್ಮ ನಮ್ರ ಕಾಯಕಗಳಲ್ಲಿ ಮಗ್ನರಾಗಿದ್ದುಕೊಂಡು ಪೂರ್ಣವ್ಯಕ್ತಿತ್ವದ ಆವಿಷ್ಕಾರವನ್ನು ಸಾಧಿಸಿದರು. ಪ್ರಸಿದ್ಧರಾದ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಮೋಳಿಗೆಯ ಮಾರಯ್ಯ ಮೊದಲಾದವರು ಹಾಗಿರಲಿ, ಮೆಟ್ಟು ಹೊಲಿಯುವ ಕಾಯಕದ ಮಾದರ ಧೂಳಯ್ಯ, ದನಕಾಯುವ ಕೆಲಸದ ತುರುಗಾಹಿ ರಾಮಣ್ಣ, ಬಾಗಿಲು ಕಾಯುವ ಪಡಿಹಾರಿ ಉತ್ತಣ್ಣ, ಹಗ್ಗ ಹೊಸೆಯುವ ನುಲಿಯ ಚಂದಯ್ಯ - ಹೀಗೆ ಹಲವಾರು ಶರಣರನ್ನು ಹೆಸರಿಸುತ್ತಾ ಹೋಗಬಹುದು. ಇವರು ವಚನಗಳನ್ನು ರಚಿಸಿ, ಆಂತರಿಕವಾಗಿ ತಾವು ಏರಿದ ನಿಲವನ್ನು ಅವುಗಳಲ್ಲಿ ವ್ಯಕ್ತಪಡಿಸಿದ್ದಾರೆ. ಧೂಳಯ್ಯ ಮೆಟ್ಟು ಹೊಲಿಯುವ ಕಾಯಕವನ್ನೇ ಆಧ್ಯಾತ್ಮಿಕ ಸಾಧನೆಯ ಸಾಂಕೇತಿಕಮಟ್ಟಕ್ಕೆ ಏರಿಸಿದರೆ, ರಾಮಣ್ಣ ದನಕಾಯುವುದನ್ನು ಅರ್ಥವತ್ತಾಗಿ ತನ್ನ ಸಾಧನೆಗೆ ಹೋಲಿಸಿದ್ದಾನೆ. 'ಕಾಯಕವೇ ಕೈಲಾಸ' ಎಂಬುದರ ಅರ್ಥವ್ಯಾಪ್ತಿ ಏನೆಂಬುದು ಇಂತಹ ಶರಣರ ವಚನಗಳನ್ನು ಕಂಡಾಗ ಮನದಟ್ಟಾಗುತ್ತದೆ. ಸಂಸ್ಕಾರ ಯಾವುದೇ ಒಂದು ಜನಾಂಗಕ್ಕೆ ಮೀಸಲಾಗಿಲ್ಲದೆ ಅವಕಾಶವನ್ನು ಕೊಟ್ಟರೆ ಸಮಾಜದ ಅತಿ ಕೆಳಸ್ತರದಿಂದಲೂ ಅದ್ಭುತ ಪ್ರತಿಭೆ ಹೇಗೆ ಅರಳಬಹುದೆಂಬುದಕ್ಕೆ ಈ ವಚನ ಚಳುವಳಿ ಇಂತಹ ಹಲವಾರು ಉದಾಹರಣೆಗಳಿಂದ ಐತಿಹಾಸಿಕ ಸಾಕ್ಷಿಯನ್ನು ಒದಗಿಸುತ್ತದೆ.

ಕಾಯಕ ಮೀಮಾಂಸೆ ಇಲ್ಲಿ ನಡೆದದ್ದು ಬೌದ್ಧಿಕವಾಗಿ ಮಾತ್ರವಲ್ಲ; *''ಕುರ್ವನ್ನೇ ವೇಹ ಕರ್ಮಾಣಿ......''* ಇತ್ಯಾದಿ ಮಾತುಗಳಲ್ಲಿ ಉಪನಿಷತ್ತು ಅದನ್ನು ಆಗಲೇ ಸೂಚಿಸಿತ್ತು. ಇಲ್ಲಿ ನಡೆದದ್ದು ಅದನ್ನು ಸಾಮಾಜಿಕ ಜೀವನದಲ್ಲಿ ಅನ್ವಯಿಸಿ, ಜೀವಂತ ಸತ್ಯವನ್ನಾಗಿಸುವ ಚಳುವಳಿ. ಬಸವಣ್ಣ ಮಂತ್ರಿಯಾಗಿದ್ದ ವೃತ್ತಿಯಿಂದ; ಬ್ರಾಹ್ಮಣನಾಗಿದ್ದ ಜಾತಿಯಿಂದ. ಹರಳಯ್ಯ, ಧೂಳಯ್ಯ, ನಾಗಮಯ್ಯ ಮೊದಲಾದವರು ಸಮಾಜ ಕೀಳೆಂದು ಕಾಣುವ ಕೆಲಸದಲ್ಲಿದ್ದವರು; ಅಸ್ಪೃಶ್ಯರಾಗಿದ್ದವರು. ಬಸವಣ್ಣನ ಧರ್ಮ ಆ ತಾರತಮ್ಯಗಳನ್ನು ತೊಡೆದುಹಾಕಿ, ಸಾಧಕನ ಮೂಲಭೂತ ಮೌಲ್ಯಗಳನ್ನು ಮಾತ್ರ ಲಕ್ಷಿಸಿ ಸರ್ವಸಮಾನತೆಯನ್ನು ಸಾಧಿಸಿ ತೋರಿಸಿತು. ಅನುಭವ ಮಂಟಪದಲ್ಲಿ ಎಲ್ಲರೂ ಸಮಾನ ಸ್ಕಂಧರಾಗಿ ಕುಳಿತು ಜಿಜ್ಞಾಸೆಯಲ್ಲಿ ತೊಡಗುತ್ತಿದ್ದರು.

ಆ ಯುಗದಲ್ಲಿ ಇದು ಊಹೆಗೂ ಮೀರಿದ ಆಚರಣೆಯಾಗಿತ್ತು. ಧರ್ಮ-ಶಾಸ್ತ್ರಗಳ ಸಾಂಪ್ರದಾಯಿಕ ಆಚರಣೆಗಳು ಉಕ್ಕಿನ ಕೋಟೆಯಂತಾಗಿ ಜನಸಾಮಾನ್ಯರು ವಿದ್ಯೆಯಿಂದ, ಧರ್ಮದಿಂದ ವಂಚಿತರಾಗಿದ್ದರು. ಅಸ್ಪೃಶ್ಯರಂತೂ ತೀರಾ ತಿರಸ್ಕೃತ ಜೀವನದಲ್ಲಿದ್ದರು. ಅವರ ನೆರಳೂ ಉತ್ತಮರ ಮೇಲೆ ಬೀಳುವಂತಿರಲಿಲ್ಲ. ವೇದಾದಿಗಳ ಮಂತ್ರಗಳನ್ನು ಅವರು ಕೇಳಿದರೆ ಕಾದ ಸೀಸವನ್ನು ಅವರ ಕಿವಿಯಲ್ಲಿ ಹಾಕಬೇಕೆನ್ನುವವರೆಗೂ ಹೋಗಿದ್ದುವು ಧರ್ಮಶಾಸ್ತ್ರಗಳು. ಆ ಪರಿಸರದಲ್ಲಿ ಬಸವಣ್ಣ ಅಸ್ಪೃಶ್ಯರ ಕೇರಿಗೆ





ಹೋಗಿ, ಹರಳಯ್ಯ ಮೊದಲಾದವರನ್ನು ಮೇಲೆತ್ತಿ ತಂದುದಲ್ಲದೆ ಶಿವನಾಗಮಯ್ಯಾದಿಗಳಿಂದ ವೇದವನ್ನೂ ಹೇಳಿಸಿದ, ಧೂಳಯ್ಯ ವಚನಕಾರನಾದ - ಎಂಬ ಅಂಶಗಳನ್ನು ಗಮನಿಸಿದರೆ ಅಂದು ಆ ಚಳುವಳಿ ಸಾಧಿಸಿದುದೇನೆಂಬುದು ಸ್ಪಷ್ಟವಾಗುತ್ತದೆ. *''ಕೊಲ್ಲುವವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ, ಕುಲವೇನೋ ಆವಂದಿರ ಕುಲವೇನೋ! ಸಕಲ ಜೀವಾತ್ಮರಿಗೆ ಲೇಸನು ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು''* ಎಂಬ ಸೂತ್ರ ಕ್ರಾಂತಿಕಾರಕವಾದದ್ದು. ಅದನ್ನು ಅಕ್ಷರಶಃ ಆಚರಿಸುವ ದಿಟ್ಟತನವನ್ನು ತೋರಿದಾಗ *''ಪಂಡಿತಾಃ ಸಮದರ್ಶಿನಃ''* ಎಂಬಂತಹ ಗೀತೆ ಉಪನಿಷತ್ತುಗಳ ಮಾತುಗಳನ್ನು ಬಾಯಿಪಾಠಮಾಡಿ ಉಗ್ಘಡಿಸುತ್ತಿದ್ದ ಪುರೋಹಿತರಿಗೇನೂ ಕಡಿಮೆಯಿರಲಿಲ್ಲ. ಆದರೆ ಅವು ಹೇಳುವುದಕ್ಕೆ ಮಾತ್ರ ಇದ್ದ ಅಲಂಕಾರ ಇಲ್ಲವೆ ವಂಚಕ ಸಾಮಗ್ರಿಯಾಗಿದ್ದುವು. ಅವುಗಳನ್ನು ಆಚರಣೆಗೆ ತರುವುದಕ್ಕಾಗಿ ಬಸವಣ್ಣ ದೊಡ್ಡ ಆಂದೋಳನವನ್ನೇ ಹೂಡಬೇಕಾಯಿತು. ಕಾಯಕದಲ್ಲಿ ಮೇಲು-ಕೀಳುಗಳು ಇಲ್ಲ; *''ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ.....''* ಇತ್ಯಾದಿಯಾದ ವಚನಗಳು ಕೇವಲ ವಚನಗಳಾಗಿ ಉಳಿಯದೆ ಚಳುವಳಿಗೆ ನಾಂದಿಯಾದುವು. ಆ ಆಶಯ ಈಡೇರುವಂತೆ ನೂರಾರು ಕಾಯಕಗಳನ್ನು ಕೈಕೊಂಡ ಶರಣರು ಅದನ್ನು ದೊಡ್ಡ ಪ್ರಮಾಣದಲ್ಲಿ ಸಾಧಿಸಿ ತೋರಿಸಿದರು.

ತತ್ತ್ವವನ್ನು ಕ್ರಿಯೆಯನ್ನಾಗಿಸುವಲ್ಲಿ ಈ ಚಳುವಳಿ ಯಶಸ್ವಿಯಾಯಿತು. ಬಸವಣ್ಣನ ವಚನ ಪರುಷವಾಯಿತು. ಅದರಿಂದ ಆಕರ್ಷಿತರಾಗಿ ದೇಶದ ನಾನಾ ಭಾಗಗಳಿಂದ ಜನ ಬಂದು ಸೇರಿದರು. ಸ್ವತಃ ಸಾಧಕನಾಗಿ ಭಕ್ತಿಭಂಡಾರಿಯಾಗಿದ್ದ ಬಸವಣ್ಣ ಕೇವಲ ಭಾವುಕನಾಗಿರದೆ, ಚಿಂತನಶೀಲನಾದ ಸಮಾಜವಿಜ್ಞಾನಿಯೂ ಆಗಿದ್ದ. ಒಂದುಕಡೆ ಸರ್ವಸಮರ್ಪಣೆಯ ಭಕ್ತಿಮಾರ್ಗ; ಇನ್ನೊಂದು ಕಡೆ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣೆ ಮತ್ತು ಅದನ್ನು ಸಾಕಾರಗೊಳಿಸುವ ಕರ್ತೃತ್ವಶಕ್ತಿ ಇವುಗಳಿಂದ ವಿಶಿಷ್ಟ ರೀತಿಯ ನಾಯಕನಾಗಿ ಈ ಚಳುವಳಿಯನ್ನು ಸಂಘಟಿಸಿದ. ಇದಕ್ಕೆ ಚೆನ್ನಬಸವಣ್ಣ ತಾತ್ವಿಕ ಹಿನ್ನೆಲೆಯನ್ನು ಒದಗಿಸಿದರೆ, ಅಲ್ಲಮಪ್ರಭು ತನ್ನ ವೈರಾಗ್ಯಪ್ರಭೆಯ ನಿಷ್ಠುರ ನಿಯಮದಿಂದ ಬೆನ್ನೆಲುಬಾಗಿ ನಿಂತ. ಸಿದ್ಧರಾಮ, ಸಕಲೇಶ ಮಾದರಸ, ಉರಿಲಿಂಗದೇವ, ಘಟ್ಟಿವಾಳಯ್ಯ, ಕಿನ್ನರಿ ಬೊಮ್ಮಯ್ಯ, ಹಡಪದ ಅಪ್ಪಣ್ಣ, ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಅಕ್ಕಮಹಾದೇವಿ, ಲಿಂಗಮ್ಮ ನೀಲಮ್ಮ ಮೊದಲಾದ ಅನುಭಾವಿಗಳೂ ತಮ್ಮ ಸಾಧನೆಯನ್ನು ಧಾರೆಯೆರೆದು ಈ ಚಳುವಳಿಯ ಎತ್ತರ ಬಿತ್ತರಗಳನ್ನು ಹೆಚ್ಚಿಸಿದರು.

ಇದು ಸಾಧಿಸಿದ ಸಮಾನತೆ ಕೇವಲ ಸಾಮಾಜಿಕವಾದ ಬಾಹ್ಯ ಆಚರಣೆ ಮಾತ್ರವಾಗಿ ಉಳಿಯಲಿಲ್ಲ. ಅಸ್ಪೃಶ್ಯರನ್ನು ಮುಟ್ಟಿಸಿಕೊಂಡರೆ, ದೇವಾಲಯ ಪ್ರವೇಶ ಮಾಡಿಸಿದರೆ ಸಾಕೆಂಬ ಸ್ಥಿತಿ ಈಗಲೂ ಇರುವಾಗ ಆ ಯುಗದಲ್ಲಿಯೇ ಬಸವಣ್ಣ ಇಷ್ಟಕ್ಕೆ ಸೀಮಿತಗೊಳಿಸದೆ ಆಂತರಿಕ ಏಕತೆಗೆ ಕಾರಣವಾಗುವ ಧಾರ್ಮಿಕ ಸಮತೆಯನ್ನು ರೂಢಿಸಿದ. ಹುಟ್ಟಿನಿಂದಲೇ ಜಾತಿಯನ್ನು ನಿರ್ಧರಿಸುವ ಮತ್ತು ಅದನ್ನು ಮೀರಲಾಗದ ಉಕ್ಕಿನ ಕೋಟೆಯಾಗಿ ಉಳ್ಳ ಹಿಂದೂಧರ್ಮದಲ್ಲಿ ಬಸವಣ್ಣ ಗುಣದಿಂದ ಜಾತಿಯನ್ನು ಅಳೆಯುವ ಚಲನಶೀಲತೆಯನ್ನು ತಂದುದು ಸಾಮಾನ್ಯ ಸಾಧನೆಯಲ್ಲ. ಅಸ್ಪೃಶ್ಯನಾಗಿದ್ದ ಹರಳಯ್ಯ ಅದೇ ಜನ್ಮದಲ್ಲಿಯೇ ತನ್ನ ಆಚರಣೆಯಿಂದ ಪರಿವರ್ತಿತನಾಗಿ ಬ್ರಾಹ್ಮಣ ಮಧುವರಸನೊಡನೆ ಧಾರ್ಮಿಕ ಸಮಾನತೆಯನ್ನು ಪಡೆಯುವಂತಾಯಿತು. ಇದಕ್ಕೆ ಅಡ್ಡಿಯಾಗಿದ್ದ ಅಂದಿನ ಸಂಪ್ರದಾಯಗಳ ವಿಕೃತ ಗ್ರಂಥಿಗಳನ್ನು ಕತ್ತರಿಸಿಹಾಕಿ ಆರೋಗ್ಯಕರವಾದ ಮಾರ್ಗವನ್ನು ರೂಪಿಸಲು ನೆರವಾಯಿತು ಈ ಚಳುವಳಿ.

ಇನ್ನೊಂದು ಮುಖ್ಯವಾದ ಅಂಶವೆಂದರೆ, ಸಮಾನತೆಯನ್ನು ಬಾಯಲ್ಲಿ ಹೇಳಿದರೆ ಸಾಲದು, ಕಾರ್ಯತಃ ಆಚರಿಸಿ ದೀನರಿಗೂ, ದಲಿತರಿಗೂ ಸಮಾನತೆಯ ಅನುಭವವನ್ನು ತಂದುಕೊಡಬೇಕಾಗಿತ್ತು. ಇದಕ್ಕಾಗಿ ಬಸವಣ್ಣ ಇಷ್ಟಲಿಂಗವನ್ನು ಬಳಸಿಕೊಂಡ. ಉದ್ಧಾರದ ಅಭೀಪ್ಸೆಯುಳ್ಳವರೆಲ್ಲರಿಗೂ ಯಾವ ತಾರತಮ್ಯವೂ ಇಲ್ಲದೆ ಇಷ್ಟಲಿಂಗದೀಕ್ಷೆಯನ್ನು ಕೊಟ್ಟ. ಶೂದ್ರರನ್ನೂ, ಅಸ್ಪೃಶ್ಯರನ್ನೂ ಈ ಸಂಸ್ಕಾರಕ್ಕೆ ಒಳಗುಪಡಿಸಿದ.

ಆಧುನಿಕರಲ್ಲಿ ಕೆಲವರು ಎತ್ತಬಹುದಾದ ಆಕ್ಷೇಪ ಇಲ್ಲಿಯೇ; ಒಂದು ಅಂಧಶ್ರದ್ಧೆಯಿಂದ ಇನ್ನೊಂದಕ್ಕೆ ಅವರನ್ನು ತಳ್ಳಿದ ಎಂಬುದಾಗಿ. ಇದನ್ನು ದೀರ್ಘವಾಗಿ ವಿವೇಚಿಸುವ ಅಗತ್ಯವಿದೆ. ಇಲ್ಲಿ ಅದಕ್ಕೆ ತೊಡಗದೆ ಒಂದು ಮಾತಿನಲ್ಲಿ ಹೇಳಬಹುದಾದರೆ; ಬಸವಣ್ಣ ಉದ್ದೇಶಿಸಿದ್ದು ದೀನರನ್ನೂ, ದಲಿತರನ್ನೂ, ದುಃಖಿಗಳನ್ನೂ ಎಚ್ಚರಗೊಳಿಸುವುದಷ್ಟೇ ಆಗಿರಲಿಲ್ಲ; ಎಚ್ಚರಗೊಂಡ ಅವರನ್ನು ಸನ್ಮಾರ್ಗದಲ್ಲಿ ಮುನ್ನಡೆಸಿ, ಸ್ವಾವಲಂಬನೆಯ ಪೂರ್ಣ ಬದುಕನ್ನೂ ಅವರು ಕಾಣುವಂತೆ ಮಾಡುವುದು ಆತನ ಆಶಯವಾಗಿತ್ತು. ನಿರ್ದಿಷ್ಟವಾದ ಗುರಿಯಿಲ್ಲದ ಎಚ್ಚರ ಅಥವಾ ಉತ್ಸಾಹ ಎಷ್ಟೆಷ್ಟು ಅಡ್ಡದಾರಿಗಳನ್ನು ಹಿಡಿಯಬಲ್ಲುದೆಂಬುದನ್ನು ಉದ್ದೇಶರಹಿತ ಸಾರ್ವತ್ರಿಕ ವಿದ್ಯಾಭ್ಯಾಸದ ಇಂದಿನ ದಿನಗಳಲ್ಲಿ ನಾವು ಹೆಜ್ಜೆ ಹೆಜ್ಜೆಗೂ ಮನಗಾಣಬಹುದಾಗಿದೆ. ಗಾಂಧೀಜಿ ಸತ್ಯ, ಅಹಿಂಸೆಗಳ ಹಿನ್ನೆಲೆಯಲ್ಲಿ ರಚನಾತ್ಮಕ ಕಾರ್ಯಕ್ರಮಗಳ ಮೂಲಕ ಆ ಉದ್ದೇಶವನ್ನು ರೂಪಿಸುವ ಪ್ರಯತ್ನಕ್ಕೆ ಅತಿ ಹೆಚ್ಚಿನ ಮಹತ್ವಕೊಟ್ಟಿದ್ದರು. ಸಾಮೂಹಿಕ ಜಾಗೃತಿಯ ಪರಿಣಾಮಗಳನ್ನು ಬಲ್ಲ ಬಸವಣ್ಣ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿಯುವ ಉದಾತ್ತ ಆದರ್ಶದ ಧಾರ್ಮಿಕ ಸೂತ್ರಗಳಿಂದ ಆ ಶಕ್ತಿಸಂಚಯನದ ಕೇಂದ್ರಗಳನ್ನು ರಚನಾತ್ಮಕವಾಗಿ ನಿಯಂತ್ರಿಸಲು ಸಮರ್ಥನಾದ. ಅದೆಲ್ಲವನ್ನೂ ನಿರಾಕರಿಸಿದ ಪ್ರಾಣಿಜೀವನದ ಸಮತೆ ಬಸವಣ್ಣನ ಆಶಯವಾಗಿರಲಿಲ್ಲ. ಮನುಷ್ಯನಿಗೆ ಮೃಗೀಯ ಧೈರ್ಯವನ್ನು ತುಂಬುವ ಕ್ರಾಂತಿಯನ್ನು ಆತ ಮಾಡಲಿಲ್ಲ. ಧೈರ್ಯ ಒಂದು ಮೌಲ್ಯವಾಗಿರು

ವಂತೆ ಸಂಯಮವೂ ಒಂದು ಮೌಲ್ಯ ಎಂಬುದನ್ನು ಆತ ಪ್ರತಿಪಾದಿಸಿದ. ದಿಟ್ಟತನ-ಸದುವಿನಯಗಳ ಸಾಮರಸ್ಯ, ಸ್ವತಂತ್ರ ವಿವೇಚನೆಯಿಂದ ಹದಗೊಳ್ಳಬೇಕೆಂಬ ಮಾನವ ವಿವೇಕವನ್ನು ಹರಿತಗೊಳಿಸಿದ. ಜನಸಾಮಾನ್ಯರಲ್ಲಿಯೂ ಅದನ್ನು ಬಿತ್ತಿದ. ಅದರ ಪರಿಣಾಮ ಆಶ್ಚರ್ಯಕರ. ನೂರಾರು ಜನ, ತೀರಾ ಕೆಳಗಿನ ಸ್ತರದವರೆಂದು ಭಾವಿಸಲಾದವರು ಕೂಡ, ಶರಣಜೀವನದ ಉನ್ನತಿಗೇರಿದರು. ಅಸ್ಪೃಶ್ಯನಾಗಿದ್ದ ಉರಿಲಿಂಗಪೆದ್ದಿ, ಉರಿಲಿಂಗ ದೇವನ ಶಿಷ್ಯನಾಗಿ ಮಠಕ್ಕೆ ಸ್ವಾಮಿಯಾಗುವುದೂ ಸಾಧ್ಯವಾಯಿತೆಂದರೆ ಹಿಂದೂಸಮಾಜದ ಸಾಂಪ್ರದಾಯಿಕ ಮನಸ್ಸು ಇಂದೂ ನಂಬಲಾರದು. ಆದರೆ ಅಂದು ಬಸವಣ್ಣನ ಚಳುವಳಿಯ ಪರಿಣಾಮವಾಗಿ ಅದು ಸಾಧ್ಯವಾಯಿತು.

ಜಾತಿಭೇದವನ್ನು ತೊಡೆದಂತೆ ಸ್ತ್ರೀ-ಪುರುಷರೆಂಬ ಲಿಂಗಭೇದವನ್ನೂ ತೊಡೆದು ಹಾಕಿದುದು ಈ ಚಳುವಳಿಯ ಇನ್ನೊಂದು ಮಹತ್ವದ ಸಾಧನೆ. ''ನಡುವೆ ಸುಳಿವಾತ್ಮ *ಹೆಣ್ಣೂ ಅಲ್ಲ ಗಂಡೂ ಅಲ್ಲ*'' ಎಂಬುದನ್ನು ಇದು ಸಾಧಿಸಿ ತೋರಿಸಿತು. ಅಕ್ಕನಾಗಮ್ಮ, ಗಂಗಾಂಬಿಕೆ, ನೀಲಾಂಬಿಕೆ, ಅಕ್ಕಮಹಾದೇವಿ ಮೊದಲಾದ ಪ್ರಮುಖರ ಮಾತು ಹಾಗಿರಲಿ ಸಾಮಾನ್ಯ ನಮ್ರ ಕಾಯಕದಲ್ಲಿ ತೊಡಗಿದ್ದ ಸಾಧ್ವಿಯರು, ನಿಷ್ಠಾವಂತ ತೇಜೋಮೂರ್ತಿಗಳಾಗಿ ಬೆಳಗಿದರು; ಪತಿಯ ಸಾಧನೆಯಲ್ಲಿ ಊರುಗೋಲಾಗಿದ್ದುಕೊಂಡೇ ತಮ್ಮ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಮಹಾದೇವಮ್ಮ ಲಕ್ಕಮ್ಮ ಲಿಂಗಮ್ಮ - ಹೀಗೆ ಹೆಸರುಗಳನ್ನು ಬೆಳೆಸುತ್ತಾ ಹೋಗಬಹುದು. ಯೋಗಸಾಧನೆಯಿಂದ ಸಾಮಾಜಿಕ ಸ್ವಾಸ್ಥ್ಯದ ನಿರ್ವಹಣೆಯವರೆಗೆ ಅವರ ಕಾರ್ಯವ್ಯಾಪ್ತಿ ಬೆಳೆದುದಲ್ಲದೇ ವಚನ ರಚನೆಯಲ್ಲಿಯೂ ಗಮನಾರ್ಹವಾದ ಕೊಡುಗೆಯನ್ನಿತ್ತಿದೆ.

ವಚನ ರಚನೆ ಬಸವಣ್ಣನವರಿಗಿಂತ ಪೂರ್ವದಲ್ಲಿ ಹನಿಯಾಗಿ ಕಾಣಿಸಿಕೊಂಡದ್ದು ಅವರು ಅದನ್ನು ಕೈಗೆತ್ತಿಕೊಂಡ ಮೇಲೆ ಮಹಾಪೂರವಾಗಿ ಭೋರ್ಗರೆಯಿತು. ತಮ್ಮ ಸ್ವತಂತ್ರ ವಿಚಾರ ವಿಶ್ಲೇಷಣೆಯನ್ನೂ, ತಮ್ಮ ಧಾರ್ಮಿಕ ಸಾಧನೆಯ ಅನುಭವಗಳನ್ನೂ ಶರಣರು ವಚನಗಳಲ್ಲಿ ಅಭಿವ್ಯಕ್ತಪಡಿಸಿದರು. ಅನುಭವಮಂಟಪದಲ್ಲಿ ವಚನ ರಚನೆಗಳ ಚಕಮಕಿಯಿಂದ, ವಿಚಾರಗಳ ತಾಕಲಾಟ, ಸಂಘರ್ಷಗಳಿಂದ ಹೊಸ ಹೊಸ ಕಿಡಿಗಳು ಸಿಡಿಯುತ್ತಿದ್ದುವು. ಆ ವಚನ ಸಂಪತ್ತನ್ನು ಸಂಗ್ರಹಿಸಿ ಅದನ್ನು ಉಳಿಸುವ ವ್ಯವಸ್ಥೆಯೂ ಅನುಭವಮಂಟಪದಲ್ಲಿತ್ತೆಂಬುದಕ್ಕೆ ವಚನಭಂಡಾರಿ ಶಾಂತರಸ ಸಾಕ್ಷಿಯಾಗಿದ್ದಾನೆ.

ಶರಣರ ಕಾರ್ಯಕ್ಷೇತ್ರದ ಎಲ್ಲ ಸಾಧನೆಗಳನ್ನೂ ವಚನ ಸಾಹಿತ್ಯ ಪ್ರತಿಬಿಂಬಿಸಿದೆ. ಬಸವ, ಅಲ್ಲಮ, ಅಕ್ಕ, ಸಿದ್ಧರಾಮ ಮೊದಲಾದ ಅನೇಕ ಶರಣರ ವಚನಗಳು ಅನುಭಾವದ ಔನ್ನತ್ಯವನ್ನೂ, ಸಾಹಿತ್ಯ ಸೌಂದರ್ಯದ ಉತ್ತುಂಗ ಶಿಖರವನ್ನೂ ಸಾಧಿಸಿಕೊಂಡಿವೆ. ಸಾಹಿತ್ಯಸೃಷ್ಟಿ ಅವರ ಮುಖ್ಯ ಉದ್ದೇಶವಾಗಿರಲಿಲ್ಲವಾದರೂ ತೀವ್ರವಾದ ತಮ್ಮ ಅನುಭವಗಳನ್ನೂ, ಅನಿಸಿಕೆಗಳನ್ನೂ ಅನ್ಯಹೃದಯ ವೇದ್ಯವಾಗಿಸುವ ಅವರ ಸಾಹಸ ಸಹಜವಾಗಿಯೇ ಶಕ್ತಿಯುತ ಸಾಹಿತ್ಯವಾಗಿ ಪರಿಣಮಿಸಿದೆ. ಆದರಿಂದ ಈ ವಚನ ಚಳುವಳಿ ತಾನರಿಯದಂತೆಯೇ ಸಾಹಿತ್ಯ ಚಳುವಳಿಯೂ ಆಯಿತು. ಇದು ವಚನ ಚಳುವಳಿಯ ಸಾಮಾಜಿಕ ಧಾರ್ಮಿಕ ಪರಿವರ್ತನೆಯ ಮಹಾಸಾಹಸ ಕಾರ್ಯದಲ್ಲಿ ಸಂಭವಿಸಿದ ಒಂದು ಉಪ ಸರಕು (By-Product) ಎಂದು ಹೇಳಬಹುದು. ಆದರೆ ಮಹತ್ವದ ದೃಷ್ಟಿಯಿಂದ ಕಡಿಮೆಯಾದುದೇನಲ್ಲ. ಅದುವರೆಗಿನ ಕನ್ನಡ ಸಾಹಿತ್ಯದ ದಿಕ್ಕನ್ನೇ ಬದಲಾಯಿಸಿ ಒಂದು ಹೊಸ ಆಯಾಮವನ್ನು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಇದು ತಂದುಕೊಟ್ಟಿತು. ವಚನ ಚಳುವಳಿಯ ಮಹತ್ವವನ್ನು ಈ ದೃಷ್ಟಿಯಿಂದಲೂ ದೀರ್ಘವಾಗಿ ವಿವೇಚಿಸಬಹುದಾಗಿದೆ.

ಒಟ್ಟಿನಲ್ಲಿ ವಚನ ಚಳುವಳಿ ಅಂದಿನ ಜನಜೀವನದಲ್ಲಿ ಸಮಗ್ರ ಕ್ರಾಂತಿಗೆ (Total Revolution) ಕಾರಣವಾದ ಒಂದು ರಚನಾತ್ಮಕ ಮತ್ತು ವಿಧಾಯಾತ್ಮಕ ಆಂದೋಳನ. ಇದು ಜೀವನವನ್ನು ಪೂರ್ಣದೃಷ್ಟಿಯಿಂದ ನೋಡಿತು. ವ್ಯಷ್ಟಿ-ಸಮಷ್ಟಿಗಳ, ಸಮಾಜ-ಧರ್ಮಗಳ, ಅಂತರಂಗ-ಬಹಿರಂಗಗಳ ಇಹ-ಪರಗಳ, ವಿಧಿ-ನಿಷೇಧಗಳ, ಬುದ್ಧಿ-ಬಾವಗಳ, ನಡೆ-ನುಡಿಗಳ, ನಿಷ್ಠೆ-ನಿಯಮಗಳ, ಆಚಾರ-ವಿಚಾರಗಳ - ಹೀಗೆ ಒಟ್ಟು ಮಾನವ ಜೀವಿತದ ಎಲ್ಲ ಸಮಸ್ಯೆಗಳ ಪದರಗಳನ್ನೂ ವಿಶ್ಲೇಷಿಸಿ, ಸಾರ್ವತ್ರಿಕವಾದ ವಿಚಾರ ಸಮ್ಮತವಾದ ಉತ್ತರವನ್ನು ಕಂಡುಕೊಳ್ಳಲು ನಡೆದ ಸಾಮೂಹಿಕ ಚಳವಳಿ ಇದು.

ಯಾವೊಂದನ್ನೂ ಹಿಂದಿನ ಗ್ರಂಥಗಳಲ್ಲಿ ಹೇಳಿದೆ ಎಂದ ಮಾತ್ರಕ್ಕೆ ಶರಣರು ಒಪ್ಪಿಕೊಂಡವರಲ್ಲ. ಕೃಷ್ಣಪರಮಾತ್ಮ ಹೇಳಿದನೆಂದು ಗೀತೆಯನ್ನು ನಾವು ಒಪ್ಪಬೇಕಿಲ್ಲ; ಇಂದಿಗೂ ಒಪ್ಪುವ ಮಾತನ್ನು ಹೇಳಿದ್ದರಿಂದ ಆತ ಪರಮಾತ್ಮನಾಗುತ್ತಾನೆ ಎಂಬ ವಿಚಾರಶೀಲವಾದ ಆಧುನಿಕ ವೈಜ್ಞಾನಿಕ ದೃಷ್ಟಿಯನ್ನು ಆ ಯುಗದಲ್ಲಿಯೇ ಶರಣರು ಪ್ರಕಟಪಡಿಸಿದರು. ಧರ್ಮದ ಹೆಸರಿನಲ್ಲಿ ಶ್ರದ್ಧೆ ಹರಿದು ಹಂಚಿಹೋಗಿರುವುದನ್ನೂ, ತಿಥಿ, ವಾರ, ನಕ್ಷತ್ರ, ಶಕುನಾದಿಗಳನ್ನು ನಂಬಿದ ಪರಾವಲಂಬನೆಯ ಅಂಧಶ್ರದ್ಧೆಯನ್ನೂ ಖಂಡಿಸಿ ಏಕೈಕ ನಿಷ್ಠೆಯ ಆಂತರಿಕ ಸಾಧನೆಗೆ ಮಹತ್ವಕೊಟ್ಟರು; ''ನೀರ ಕಂಡಲ್ಲಿ ಮುಳುಗುವರಯ್ಯ, ಮರನ ಕಂಡಲ್ಲಿ ಸುತ್ತುವರಯ್ಯ...'' ಎಂಬ ವಚನದಲ್ಲಾಗಲೀ ''ಬೀರಯ್ಯ, ಕೇತಯ್ಯ, ಧೂಳಯ್ಯ ಮೊದಲಾದ ನೂರಾರು ಮಡಕೆಗಳಿಗೆ ಕೂಡಲಸಂಗಮದೇವ ಶರಣೆಂಬ ಒಂದು ದೊಡ್ಡ ದೊಣ್ಣೆ ಸಾಲದೆ'' ಎಂಬ ವಿಡಂಬನೆಯಲ್ಲಾಗಲೀ ಬಸವಣ್ಣ ವ್ಯಕ್ತಪಡಿಸಿದ ಏಕಮೇವ ನಿಷ್ಠೆ ಆಂತರಿಕ ಸಾಧಕಶಕ್ತಿಯನ್ನು ಜಾಗೃತಗೊಳಿಸುವಂತಹುದು. ಈ ಅಚಲನಿಷ್ಠೆಯೇ ನೂರಾರು ಶರಣರ ವಚನಗಳಲ್ಲಿ ಪ್ರತಿಧ್ವನಿಸಿದೆ.





ವಾರಗಳಲ್ಲಿ ಒಳಿತು-ಕೆಡುಕುಗಳನ್ನಾಗಲೀ, ರಾಹುಕಾಲ-ಗುಳಿಕ ಕಾಲಾದಿಗಳನ್ನಾಗಲೀ, ಭವಿಷ್ಯವನ್ನಾಗಲಿ ಅತಿಯಾಗಿ ನಂಬಿ ಅವಕ್ಕೆ ಅಡಿಯಾಳಾದವರನ್ನು ಕಂಡು ಅವರು ಹಾಸ್ಯ ಮಾಡುತ್ತಾರೆ. ಸಣ್ಣಪುಟ್ಟ ವಿಷಯಗಳಿರಲಿ ಮದುವೆಯಂತಹ ಮಹತ್‌ಕಾರ್ಯಕ್ಕೂ ''ಎಮ್ಮವರೊಲಿದುದೇ ಶುಭ ಲಗ್ನವೆನ್ನಿರಯ್ಯ'' ಎಂದು ಮುಂತಾಗಿ ಹೇಳುವಂತಹ ಮಾತುಗಳ ಆಚರಣೆ ಇಂದಿನ ವೈಜ್ಞಾನಿಕ ಯುಗದ ವಿಚಾರವಂತರಿಗೂ ಪೂರ್ಣವಾಗಿ ಸಾಧ್ಯವಾಗುವಂತಿಲ್ಲ ಎಂಬುದನ್ನು ನೆನೆದರೆ ಶರಣರ ಧೀರನಿಷ್ಠೆ ಸ್ಪಷ್ಟವಾಗುತ್ತದೆ.

ಹೀಗೆ ಜೀವನದ ಎಲ್ಲ ಹಂತಗಳಲ್ಲಿಯೂ ಶರಣರ ವಚನ ಚಳುವಳಿ ಆತ್ಮಸತ್ವಕ್ಕೆ, ಸತ್ಯನಿಷ್ಠೆಗೆ ಒತ್ತುಕೊಟ್ಟಿತು. ಮೂರ್ತಿ ಪೂಜೆಯನ್ನು ತಿರಸ್ಕರಿಸಿ ಆಂತರಂಗಿಕ ಅನುಸಂಧಾನವನ್ನೂ, ಆ ಮೂಲಕ ದೇವಾಲಯಗಳನ್ನೂ, ಪುರೋಹಿತಶಾಹಿಯನ್ನೂ, ಧರ್ಮದಳ್ಳಾಳಿಗಳನ್ನೂ, ಶೋಷಣೆಯನ್ನೂ ಒಂದೇ ಏಟಿಗೆ ಹೊಡೆದು ಹಾಕಿತು. ಇದರ ಒಂದೊಂದು ಅಂಶವನ್ನೂ, ಅದು ಶರಣರ ಆಚರಣೆಯಿಂದ ವಚನಗಳಲ್ಲಿ ಮೂಡಿ ಚಳುವಳಿಯಾಗಿ ವ್ಯಾಪಿಸಿದುದನ್ನೂ ವಿವರವಾಗಿ ಚರ್ಚಿಸುತ್ತಾ ಹೋಗಬಹುದು.

ಇದುವರೆಗೂ ಇಲ್ಲಿ ಹೇಳಿದುದರ ಮಥಿತಾರ್ಥ ಇಷ್ಟೆ; ಬಸವಣ್ಣನ ನೇತೃತ್ವದಲ್ಲಿ ಪ್ರಾರಂಭವಾದ ಸಾಮಾಜಿಕ, ಧಾರ್ಮಿಕ ಪರಿವರ್ತನೆಯ ಕಾರ್ಯ ಕ್ರಮೇಣ ವಚನಗಳ ಮಾಧ್ಯಮದಿಂದ ಒಂದು ದೊಡ್ಡ ಆಂದೋಳನವಾಗಿ ಬೆಳೆಯಿತು. ಇದು ಬೌದ್ಧಿಕ ಜಿಜ್ಞಾಸೆಯಲ್ಲಾಗಲೀ, ಸಾಹಿತ್ಯ ರಚನೆಯ ಕೌಶಲ್ಯದಲ್ಲಾಗಲೀ ಪರ್ಯವಸಾನಗೊಳ್ಳದೆ ಸಮಾಜದ ಕುಂಡಲಿನಿಯನ್ನು ಜಾಗ್ರತಗೊಳಿಸುವ ಸಾಮೂಹಿಕ ಶಕ್ತಿಯಾಗಿ ಉನ್ಮುಖಗೊಂಡು, ಸಮಗ್ರವಾದ ಒಂದು ಚಳುವಳಿಗೆ ಕಾರಣವಾಯಿತು. ತಾರತಮ್ಯದಿಂದ ಕೂಡಿದ ಸಂಕೀರ್ಣ ಶ್ರೇಣಿಯೇ ನಿಯಮವಾಗಿದ್ದ ಅಂದಿನ ಸಮಾಜದಲ್ಲಿ ಇದ್ದಕ್ಕಿದ್ದಂತೆ ಸರ್ವಸಮಾನತೆಯ ಆಧಾರದ ಮೇಲೆ ನಿರ್ಮಿತವಾದ ಚಲನಶೀಲ ಜಂಗಮ ಸಮಾಜವನ್ನು ನಿರ್ಮಿಸುವಲ್ಲಿ ಆ ಚಳುವಳಿ ಯಶಸ್ವಿಯಾದದ್ದು ಒಂದು ಪವಾಡವೇ ಸರಿ. ಅದು ಹಾಗೇ ಮುಂದುವರಿದು ಬರಲಿಲ್ಲ ಎಂಬ ಮಾತು ಅದರ ಮಹತ್ವವನ್ನು ಕುಗ್ಗಿಸಲಾರದು. ಅದು ಮಾನವ ಸ್ವಭಾವದ ದೌರ್ಬಲ್ಯಕ್ಕೆ ಸಾಕ್ಷಿಯಾಗಬಹುದು. ಗಾಂಧೀಜಿ ಯಾವ ಮೌಲ್ಯಗಳಿಗಾಗಿ ಜೀವ ತೆತ್ತರೋ, ಅವೆಲ್ಲಾ ಅವರ ಶಿಷ್ಯರಿಂದಲೇ ಮಣ್ಣುಗೂಡುತ್ತಿರುವುದನ್ನು ಕಣ್ಣಾರೆ ಕಾಣುತ್ತಿರುವ ನಾವು ಆ ಸತ್ಯವನ್ನು ಅರ್ಥಮಾಡಿಕೊಳ್ಳಬಹುದು. ಆದರೆ ಆದರಿಂದ ಮೂಲ ಚಳುವಳಿಯ ಮಹತ್ವ ಕುಗ್ಗುವುದಿಲ್ಲ. ಬಹುಶಃ ಇನ್ನೂ ಹೆಚ್ಚುತ್ತದೆ. ಆದ್ದರಿಂದ ಇಂದಿನ ವೀರಶೈವದಿಂದ ಅಂದಿನ ವಚನ ಚಳುವಳಿಯನ್ನು ಅಳೆಯಬಾರದು. ಅಂದಿನ ಅದರ ಸಾಧನೆಯನ್ನು ವೈಚಾರಿಕವಾಗಿ ನೋಡಬೇಕು. ಆದರೆ ವಿಚಾರಶೀಲತೆಯ ಹೆಸರಿನಲ್ಲಿ ಮೂಲಮೌಲ್ಯಗಳನ್ನು ಗಾಳಿಗೆ ತೂರುವ ಅವಿಚಾರವನ್ನು ಶರಣರು ಮಾಡಲಿಲ್ಲ. ಇಂದಿನ ಪ್ರೌಢವಾದ, ಪ್ರಬುದ್ಧವಾದ ಆಲೋಚನೆಯಿಂದ ಅಂದಿನ ಶರಣರ ವಿಚಾರನಿಷ್ಠೆಯನ್ನು ಹೆಚ್ಚು ಹೆಚ್ಚಾಗಿ ಕಂಡುಕೊಳ್ಳಬಹುದು. ಅತ್ತ ಗಮನ ಸೆಳೆಯುವ ಆ ಚಳುವಳಿಯ ರೂಪರೇಷೆಯನ್ನು ಮಾತ್ರ ಇಲ್ಲಿ ಮಾಡಿಕೊಡಲಾಗಿದೆ.

(ಸೌಜನ್ಯ : ವೀರಶೈವದೀಪ್ತಿ - ಸಾಹಿತ್ಯ ಚಿಂತನ
ಲೇಖಕ : ಡಾ. ಎಚ್. ತಿಪ್ಪೇರುದ್ರಸ್ವಾಮಿ)



''.......... ಈಗ ಮಾಡಿರುವುದಕ್ಕಿಂತ ಹೆಚ್ಚಾದ ಕೆಲಸವನ್ನು ಮಾಡದೆ ಇರುವುದಕ್ಕೆ ವಿದ್ಯಾವಂತರಾದ ಕನ್ನಡಿಗರ ಔದಾಸೀನ್ಯವೇ ಮುಖ್ಯ ಕಾರಣ..... ನಮ್ಮ ಹೃದಯದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನ ಇನ್ನೂ ದೊರೆತಿಲ್ಲ. ಹಿಂದೆ ಸಂಸ್ಕೃತದಿಂದ, ಈಚೆಗೆ ಇಂಗ್ಲೀಷಿನಿಂದ ಕನ್ನಡವು ಕಡೆಗೆ ಬಿತ್ತು........ ನಮಗೆ ನಮ್ಮ ಭಾಷೆ ದೇವಭಾಷೆ ಎಂಬ ಮಮತೆ ಇರಬೇಕು........ ನಮ್ಮ ನಾಡ ಜನರೆಲ್ಲ ಕನ್ನಡವನ್ನು ಚೆನ್ನಾಗಿ ಕಲಿಯಬೇಕು............. ಕನ್ನಡವನ್ನು ಪ್ರಪಂಚದ ಪ್ರಮುಖ ಭಾಷೆಗಲ್ಲಿ ಒಂದೆನ್ನುವುದು ನಮ್ಮೆಲ್ಲರ ಕರ್ತವ್ಯ.......... ನಾವು ಕನ್ನಡ ಭಾಷೆಗೆ ವಿದ್ಯಾಭ್ಯಾಸದಲ್ಲಿ ಸರಿಯಾದ ಸ್ಥಾನವನ್ನು ಕಲ್ಪಿಸಬೇಕು.......... ವಿದ್ಯೆಯಿಂದ ಮನುಷ್ಯನಿಗೆ ಮುಖ್ಯವಾಗಿ ಭಾವ ವಿಕಾಸವಾಗಬೇಕು. ಇದು ಮಾತೃಭಾಷೆಯಿಂದ ಆಗುವಂತೆ ಇನ್ನು ಯಾವ ಭಾಷೆಯಿಂದಲೂ ಆಗಲಾರದು........ ಕನ್ನಡವೇ ನಮಗೆಲ್ಲ ಭಾಷೆ. ಅದನ್ನು ಬಿಟ್ಟರೆ ನಮಗೆ ಬರೆಯುವ ಭಾಷೆಯಿಲ್ಲ; ಅದನ್ನು ಬಿಟ್ಟರೆ ನಮಗೆ ಓದುವ ಭಾಷೆಯಿಲ್ಲ ಎಂದು ನಿರ್ಧಾರ ಮಾಡಿ ಕನ್ನಡವನ್ನು ನಾವೆಲ್ಲ ಹಿರಿದಾಗಿ ಮಾಡಬೇಕು.......... ಇದಕ್ಕೆ ಕನ್ನಡವನ್ನು ಮುಖ್ಯ ಭಾಷೆಯಾಗಿ ಎಣಿಸಿ ಸೀಮೆಗೆಲ್ಲ ಕೇಂದ್ರವಾಗುವ ಒಂದು ವಿಶ್ವವಿದ್ಯಾಪೀಠವು ಅವಶ್ಯಕ........ ಇದಲ್ಲದೆ, ನಾವು ನಮ್ಮ ಸೀಮೆ ಆಡಳಿತದಲ್ಲಿ ಸಾಧ್ಯವಾದಲ್ಲೆಲ್ಲ ಕನ್ನಡವನ್ನು ಒಡನೆಯೇ ವಾಡಿಕೆಗೆ ತರಬೇಕು........ ಕಾಯಿದೆ, ಕಾನೂನುಗಳೂ ಕನ್ನಡದಲ್ಲಿ ಮುಖ್ಯವಾಗಿ ಪ್ರಚುರವಾಗಬೇಕು....... ಇದಕ್ಕೆ ಎಲ್ಲ ನಾಡ ಜನರೂ ಸೇರಿ ಕೆಲಸ ಮಾಡಬೇಕಾಗಿದೆ. ಕನ್ನಡ ನಾಡು ಸುಂದರವಾದ ನಾಡು. ಕನ್ನಡ ಮಾತು ಸುಂದರವಾದ ಮಾತು........''

- ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್
ಜ್ಞಾನಪೀಠ ಪ್ರಶಸ್ತಿ ವಿಜೇತರು

# ಅಡುಗೆ-ಊಟ

- ಟಿ.ಆರ್. ಮಹಾದೇವಯ್ಯ
೩೭೬, ೮ನೇ ಕ್ರಾಸ್, ಸಿದ್ಧಗಂಗಾ ಶುಭ ಸದನದ ಬಳಿ,
ಮಂಜುನಾಥ ನಗರ, ಬೆಂಗಳೂರು-೧೦

ಅಡಿಗೆ ಮಾಡುವುದು ಊಟ ಮಾಡುವುದು ಜೀವನದಲ್ಲಿ ನಿತ್ಯವೂ ನಡೆಯುವ ಕ್ರಿಯೆಗಳು - ಅದರಲ್ಲೇನಿದೆ ವಿಶೇಷ ಎನ್ನಬಹುದು. ವಿಚಾರ ಮಾಡಿ ನೋಡಿದರೆ ಅಡಿಗೆ-ಊಟಗಳೆರಡರಲ್ಲೂ ಚಿಂತನೀಯವಾದ ಹಲವಾರು ವಿಷಯಗಳಿವೆ.

ಅಡಿಗೆ ಮಾಡುವುದು ಒಂದು ವಿಶಿಷ್ಟ ಕಲೆ. ಶುಚಿ-ರುಚಿಯಾದ, ಪೌಷ್ಟಿಕವಾದ ಆಹಾರ ತಯಾರಿಸುವುದು ಸಾಧಾರಣವಾದ ಕೆಲಸವೇನಲ್ಲ. ಅಟ್ಟ ಅಡಿಗೆಯನ್ನು ಒಪ್ಪ-ಓರಣವಾಗಿ ಬಡಿಸುವುದು ಕೂಡ ಅಷ್ಟೇ ಮುಖ್ಯ ನೈಪುಣ್ಯವನ್ನು ಬಯಸುತ್ತದೆ. ಬಡಿಸುವವರ ಪ್ರೀತಿ-ವಿಶ್ವಾಸವೂ ಸಹ ಆಹಾರವನ್ನು ಸವಿಗೊಳಿಸಲು ಬೇಕು. ಇಷ್ಟಾದರೆ ಮುಗಿಯಲಿಲ್ಲ. ಅದನ್ನು ತಿನ್ನುವಾತನಿಗೆ ಊಟಮಾಡುವ ರೀತಿ-ನೀತಿಯೂ ತಿಳಿದಿರಬೇಕು. ''ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ'' ಎಂಬ ಗಾದೆಯೇ ಇದೆ. ಅಂದರೆ ಊಟ ಮಾಡುವುದೂ ಒಂದು ಕಲೆ ಎಂದಂತಾಯಿತು. ಬಹಳ ಜನಕ್ಕೆ ಇದು ಗೊತ್ತಿಲ್ಲ. ಹಸಿದಾಗ ಹೊಟ್ಟೆಯನ್ನು ತುಂಬುವುದಷ್ಟೇ ಕೆಲವರಿಗೆ ತಿಳಿದಿರುವುದು. ನಾವು ಆಹಾರವನ್ನು ಯಾವ ಭಾವನೆಯಿಂದ ಸ್ವೀಕರಿಸುತ್ತೇವೆ ಎಂಬುದು ಮುಖ್ಯ ಎನ್ನುತ್ತಾರೆ ಜ್ಞಾನಿಗಳು. ಮಾಡಿದ ಅಡುಗೆ ಹಸಿವ ತಣಿಸುವ ಆಹಾರ ಅಷ್ಟೇ. ಅದನ್ನು ದೇವರಿಗೆ ಅರ್ಪಿಸಿದಾಗ ಪ್ರಸಾದವಾಗುತ್ತದೆ; ಪಾವನವೆನಿಸುತ್ತದೆ. ನಮಗೆ ಕಾಲಕಾಲಕ್ಕೆ ಆಹಾರ ಒದಗಿಸುವ ಭಗವಂತನ ಕೃಪೆಯನ್ನು ನೆನೆಯುವುದು ನಾವು ಆತನಿಗೆ ತೋರಿಸಬಹುದಾದ ಕನಿಷ್ಠ ಕೃತಜ್ಞತೆ. ಅದನ್ನೂ ಮಾಡದೇ ತಿನ್ನುವ ಅನ್ನ ಬರಿಯ ಕೂಳು, ಹೊಟ್ಟೆ ತುಂಬಿಸುವ ಸರಕು!

ತಾನು ಊಟ ಮಾಡುತ್ತಿರುವುದು ಪವಿತ್ರ ಪ್ರಸಾದವೆಂಬ ಭಾವನೆ ಮೂಡಿದ ಮೇಲೆ ಅದನ್ನು ಹಾಳು ಮಾಡುವ ಮನಸ್ಸಾಗುವುದಿಲ್ಲ. ದೇವಸ್ಥಾನಗಳಲ್ಲಿ ನೀಡಿದ ತೀರ್ಥ-ಪ್ರಸಾದಗಳನ್ನು ಹೇಗೆ ಪೂಜ್ಯಭಾವದಿಂದ ನಿಶ್ಶೇಷವಾಗಿ ಸೇವಿಸಿ ಧನ್ಯತಾಭಾವವನ್ನು ಪಡೆಯುತ್ತೇವೆಯೋ ಹಾಗೆಯೇ ನಾವು ದಿನವೂ ಸ್ವೀಕರಿಸುವ ಆಹಾರವನ್ನು ಅಂಥದೇ ಸದ್ಭಾವನೆಯಿಂದ ಸೇವಿಸತೊಡಗಿದರೆ ತಟ್ಟೆಗಳಲ್ಲಿ, ಎಲೆಗಳಲ್ಲಿ ವ್ಯರ್ಥವಾಗಿ ಉಳಿಸಿ ಹಾಳುಮಾಡುವುದಾದರೂ ತಪ್ಪುತ್ತದೆ. ಒಂದುಕಡೆ ಹೊಟ್ಟೆಗೆ ಗತಿಯಿಲ್ಲದೆ ಹಾಹಾಕಾರಪಡುವ ಜನ; ಇನ್ನೊಂದು ಕಡೆ ಅರ್ಧಂಬರ್ಧ ತಿಂದು ಚೆಲ್ಲುವ ಪ್ರತಿಷ್ಠೆಯ ಜನ. ಆಹಾರದ ಪೋಲನ್ನು ತಪ್ಪಿಸುವ ಈ ಪ್ರಸಾದ ಕಲ್ಪನೆ ಇಂದು ತೀರಾ ಪ್ರಸ್ತುತವಾಗಿದೆ. ಇದನ್ನರಿತ ತತ್ತ್ವವೇತ್ತರು ಅನ್ನವನ್ನು 'ಬ್ರಹ್ಮ' ಎಂದರು. 'ಅನ್ನ ದೇವರಿಗಿಂತ ಇನ್ನು ದೇವರುಂಟೆ' ಎಂದು ಕವಿಗಳು ದನಿಗೂಡಿಸಿದರು. ದೇವರ ಸಮಾನವಾದ ಆಹಾರವನ್ನು ನಾವು ಎಂಥ ಪೂಜ್ಯಭಾವದಿಂದ ಸ್ವೀಕರಿಸಬೇಕು?

ತಾನು ತಿನ್ನುವ ಆಹಾರವನ್ನು ಪವಿತ್ರಗೊಳಿಸಿ ಅದು ದೇಹಕ್ಕಷ್ಟೇ ಅಲ್ಲ, ಮನಸ್ಸಿಗೂ ತೃಪ್ತಿ-ನೆಮ್ಮದಿ ತರುವ ಬಗೆಯನ್ನು ನಮ್ಮ ಹಿರಿಯರು ತೋರಿಸಿಕೊಟ್ಟಿದ್ದಾರೆ. ತುತ್ತಿಗೊಮ್ಮೆ 'ಶಿವ-ಶರಣು' ಎನ್ನುತ್ತಾ ಪ್ರಸನ್ನಚಿತ್ತದಿಂದ, ಸಾತ್ವಿಕಭಾವದಿಂದ ಸ್ವೀಕರಿಸಿದ ಆಹಾರ ರಕ್ತಗತವಾದಾಗ ಮನುಷ್ಯ ಕೆಟ್ಟದ್ದನ್ನು ಮಾಡಲಾರ. ಹೀಗಾಗಿ ಸಾಮಾಜಿಕ ಸ್ವಾಸ್ಥ್ಯಕ್ಕೂ, ವ್ಯಕ್ತಿಯ ಆಹಾರ ಸೇವನೆಗೂ ಅಂದರೆ ಊಟಕ್ಕೂ ನಿಕಟ ಸಂಬಂಧವಿದ್ದೇ ಇದೆ. ನಾವು ಏನನ್ನು, ಹೇಗೆ ಉಣ್ಣುತ್ತೇವೆ ಎಂಬುದರ ಮೇಲೆ ನಮ್ಮ ಮನಸ್ಥಿತಿ ಇರುತ್ತದೆ; ಬದುಕನ್ನು ರೂಪಿಸುತ್ತದೆ ಎಂದಾಗ ಸೇವಿಸುವ ಊಟ ಹೇಗಾದರೂ ಇರಲಿ, ಅದನ್ನು ಹೇಗಾದರೂ ಹೊಟ್ಟೆ ತುಂಬಿಸಿಕೊಂಡರಾಯಿತು ಎನ್ನಲಾದೀತೆ?

ಇನ್ನೊಂದು ವಿಚಾರವೂ ಊಟ-ತಿಂಡಿಯ ವಿಚಾರದಲ್ಲಿ ಅಡಗಿದೆ. ಊಟಕ್ಕೆ ಕುಳಿತವನು ತುತ್ತನ್ನು ಕೈಯಲ್ಲಿ ಹಿಡಿದು ಬಾಯಿಗಿಡುವ ಮುಂದೆ ಒಂದು ಪ್ರಶ್ನೆಯನ್ನು ಕೇಳಿಕೊಳ್ಳಬೇಕಂತೆ. ಒಬ್ಬ ದಾರ್ಶನಿಕ ಕವಿ ಹೇಳುತ್ತಾನೆ ; 'ಅನ್ನವನುಣುವಂದು ನೀಂ ಕೇಳ್ ಅದನು ಬೇಯಿಸಿದ ನೀರು ನಿನ್ನ ಬೆವರೋ, ಪರರ ಕಣ್ಣೀರೋ?' ''ನೀನು ತಿನ್ನುವ ಆಹಾರ ಯಾರ ಶ್ರಮದ ಫಲ? ಅವರ ಶ್ರಮಕ್ಕೆ ಪ್ರತಿಯಾಗಿ ನೀನೇನನ್ನು ನೀಡಲು ಸಂಕಲ್ಪಿಸಿದ್ದೀಯ? ಅಂಥದ್ದೇನೂ ಮಾಡದೆ ತಿಂದರೆ ಅದು ಋಣಗೂಳು ಆಗುತ್ತದೆ. ನಿನ್ನ ಹಸಿವೆಗೆ ಒದಗಿದ ಉಣಿಸಿಗೆ ಪ್ರತಿಯಾಗಿ ನೀನು ಸಮಾಜಕ್ಕೆ ಏನನ್ನಾದರೂ ಮಾಡು.''

ಕವಿಯ ಆಶಯದಂತೆ ಇಂಥ ಭಾವನೆಯನ್ನು ತಳೆದು ಆಹಾರ ಸೇವಿಸುವವನು ಸಮಾಜಕ್ಕೆ ಹಿತಕಾರಿಯಾಗಿ ಬಾಳುವುದರಲ್ಲಿ ಯಾವ ಸಂಶಯವೂ ಇಲ್ಲ.





ಅಡಿಗೆ-ಊಟಗಳನ್ನು ಕುರಿತು ವಿಚಾರ ಮಾಡುವಾಗ ಇನ್ನೊಂದು ಮಹತ್ವದ ಸಂಗತಿ ನೆನಪಾಗುತ್ತದೆ. ಒಲೆಯ ಮೇಲಿಟ್ಟು ಬೇಯಿಸಿ ಉಣ್ಣುವುದನ್ನು ಎಲ್ಲರೂ ಮಾಡುತ್ತಾರೆ. ಆದರೆ ತಲೆಯಲ್ಲಿ ಅಟ್ಟುಣ್ಣುವವರು ತೀರಾ ಕಡಿಮೆ. ಏಕೆಂದರೆ ಬಹು ಜನರಿಗೆ ಅದರ ಪರಿ ಗೊತ್ತಿಲ್ಲ; ಅದರ ಸವಿ ತಿಳಿದಿಲ್ಲ.

ಒಲೆಯಲ್ಲಿ ಅಟ್ಟುಣ್ಣುವಾಗ ಹೊಗೆಯುಂಟು, ಹಗೆಯುಂಟು
ಅದರಿಂದ ಶಾರೀರಿಕ ತೃಪ್ತಿಯುಂಟು, ಬರಿಯ ಭೌತಿಕ ಆನಂದವುಂಟು
ತಲೆಯ ಪಾಕ ಮಾಡುವಾಗ ಹೊಗೆಯಿಲ್ಲ, ಹಗೆಯಂತೂ ಹತ್ತಿರ ಸುಳಿಯದು
ಅದು ದೊರಕಿಸುವುದು ಆತ್ಮಾನಂದವನ್ನು, ಮನದೊಳಗಿನ ಕತ್ತಲೆ-ಕ್ಲೈಬ್ಯಗಳ್

ಅಜ್ಞಾನ-ಜಡತ್ವಗಳ ದೂಡಿ ಜಗ್ಗನೆ ಪ್ರಸನ್ನಬೆಳಕನು ತುಂಬುವುದು ಈ ಪಾಕ.

ಒಲೆಯಲ್ಲಿ ಅಟ್ಟುಣ್ಣುವ ಪಾಕ ತಲೆಯಲ್ಲಿ ಅಟ್ಟುಣ್ಣುವ, ಹೃದಯದಲ್ಲಿ ಪಾಕಗೊಳಿಸಿ ಸೇವಿಸುವ ಪಾಕಕ್ಕೆ ಸಾಧಕವಾಗಬೇಕು. ಆದ್ದರಿಂದ ನಾವು ಸೇವಿಸುವ ಪಾಕವು ಬರಿಯ ಬಾಯ್ಸವಿಯ ಭವಿಪಾಕವಾಗದೆ, ಆತ್ಮೋನ್ನತಿಗೆ ಸಾಧಕವಾಗುವ ಅನುಭಾವದ ರಸಪಾಕವಾಗಬೇಕು.

ಅದಕ್ಕೇ ಶಿವಯೋಗಸಂಪನ್ನರಾದ ಸರ್ಪಭೂಷಣ ಶಿವಯೋಗಿಗಳು ಹೀಗೆ ಹಾಡಿದ್ದು ;

ಅನುಭವದಡಿಗೆಯ ಮಾಡಿ
ಅದಕ್ಕನುಭವಿಗಳು ಬಂದು ಕೂಡಿ
ತನುವೆಂಬ ಭಾಂಡವ ತೊಳೆದು
ಮನದ ಜಂಜಡವೆಂಬ ಮುಸುರೆಯ ತೊಳೆದು...
ಹರಭಕ್ತಿಯೆಂದೆಂಬ ಎಸರನಿಟ್ಟು
ಅರಿವೆಂಬ ಬೆಂಕಿಯ ಕೊಟ್ಟು
ಪರವೆಂಬ ಸಾಮಗ್ರಿಗೂಡಿ
ಮೋಕ್ಷವೆಂಬ ಪಾಕವ ಮಾಡಿ
ಉಂಡು ದಣ್ಣನೆ ದಣಿದು...

ಆದ್ದರಿಂದ ಒಲೆಯ ಹೂಡಿ ತಯಾರಿಸುವ ಮೃಷ್ಟಾನ್ನ ಭೋಜನದಂತೆಯೇ ಜ್ಞಾನಿಗಳೊಡನಾಡಿ ಪಡೆಯುವ ಜ್ಞಾನಾನುಭವಗಳ ಊಟ ಆತ್ಮದ ಹಸಿವೆಯನ್ನು ಹಿಂಗಿಸಲು ಬೇಕೇ ಬೇಕು. □



''.......... ಕನ್ನಡಿಗರೆಂದರೆ ಕನ್ನಡ ಭಾಷೆಯನ್ನಾಡುವವನೆಂದು........ ಕನ್ನಡವನ್ನಾಡುವವನೇ ಕನ್ನಡವನ್ನು ಆಡಿಸಬಲ್ಲ....... ನಾವು ಕನ್ನಡಿಗರೆಂಬುದನ್ನು ನಮ್ಮಲ್ಲರನೇಕರು ಮರೆತಂತಿದೆ........ ಈ ಕನ್ನಡತನಕ್ಕೆ ತನ್ನರಿವು ಇನ್ನೂ ಕೊನರಿಲ್ಲ. ಅದು ಕೊನರಬೇಕು..........ಕನ್ನಡಿಗನೆಂದರೆ ಕನ್ನಡಿಸಿದ ವಿಶ್ವಮಾನವನಲ್ಲದೆ ಬೇರೆಯಲ್ಲವೆಂಬುದನ್ನು ಜಗತ್ತಿಗೆ ತೋರಿಸಿಕೊಡಲಿ....... ಕನ್ನಡ ಉಚ್ಚಶಿಕ್ಷಣದ ಮಾಧ್ಯಮವಾಗಬೇಕಾದುದು ಅಗತ್ಯ..........''

- ಡಾ. ವಿ.ಕೃ. ಗೋಕಾಕ್
ಜ್ಞಾನಪೀಠ ಪ್ರಶಸ್ತಿ ವಿಜೇತರು



''........ಜಗತ್ತಿನ ಎಲ್ಲ ಭಾಷೆಗಳಿಗಿಂತ ಕನ್ನಡ ಭಾಷೆ ಅತ್ಯಂತ ಆದರಣೀಯ ಭಾಷೆಯಾಗಿದೆ. ಬೇರೆ ಭಾಷೆ ಹಾಗೂ ಭಾಷೆಗಳನ್ನು ಮಾತನಾಡುವ ಜನರನ್ನೂ ಆದರದಿಂದ ತನ್ನೊಳಗೆ ಸೇರಿಸಿಕೊಳ್ಳುವ ಮನೋಭಾವ ಕನ್ನಡ ಜನತೆಯಲ್ಲಿ ಮನೆ ಮಾಡಿದೆ........''

- ಡಾ. ಯು.ಆರ್. ಅನಂತಮೂರ್ತಿ
ಜ್ಞಾನಪೀಠ ಪ್ರಶಸ್ತಿ ವಿಜೇತರು

# ಹಿಂದೂ - ವೀರಶೈವ - ಲಿಂಗಾಯತ

- ಎಂ. ಚಂದ್ರಪ್ಪ
ನಿವೃತ್ತ ಆರೋಗ್ಯ ಇಲಾಖಾಧಿಕಾರಿ,
'ಸರ್ವಮಂಗಲ', ೬ನೆ ತಿರುವು, ೧ನೇ ಮುಖ್ಯರಸ್ತೆ,
ವಿಜಯನಗರ, ಬೆಂಗಳೂರು-೫೬೦ ೦೪೦.

ಕರ್ನಾಟಕ ಸರ್ಕಾರದ. ಕೃಪೆಯಿಂದ ಬಸವಪೂರ್ವ, ಬಸವ ಸಮಕಾಲೀನ, ಬಸವೋತ್ತರ ಶರಣರಿಂದ ರಚಿಸಲ್ಪಟ್ಟ ಸುಮಾರು ಇಪ್ಪತ್ತು ಸಾವಿರಕ್ಕೂ ಮೇಲ್ಪಟ್ಟ ಕ್ರಿಯಾಜ್ಞಾನುಭಾವಯುಕ್ತವಾದ ವಚನಗಳು ಲಭ್ಯವಾಗಿವೆ. ಕೆಲವರು ಇತ್ತೀಚೆಗೆ ಲಿಂಗಾಯತ ಧರ್ಮವು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾಂರ್ಗತವಾಗಿ ಹನ್ನೆರಡನೆ ಶತಮಾನದಲ್ಲಿ ಸ್ಥಾಪಿತವಾಯಿತೆಂಬ ಗುಲ್ಲನ್ನೆಬ್ಬಿಸಿರುತ್ತಾರೆ. ಸತ್ಯಾಂಶವೆಂದರೆ ಇಡೀ ಇಂದು ಲಭ್ಯವಿರುವ ಇಪ್ಪತ್ತು ಸಹಸ್ರ ಸಂಖ್ಯೆಯ ವಚನೋಪನಿಷತ್ ಸಾಹಿತ್ಯವನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಅವಲೋಕನ ಮಾಡಿದಾಗ ಯಾವದೇ ಶರಣರು 'ಲಿಂಗಾಯತ ಧರ್ಮ' ಎಂದು ಎಲ್ಲಿಯೂ ಹೆಸರಿಸಿಲ್ಲಾ ಎಂಬುದು ಸ್ಪಷ್ಟವಾಗುತ್ತದೆ. ಹದಿನಾಲ್ಕು ವಚನ ಸಂಪುಟಗಳಲ್ಲಿ ವೀರಶೈವ, ವೀರ ಮಾಹೇಶ್ವರ, ಲಿಂಗವಂತ, ಲಿಂಗಾಯತ ಪದಗಳು ಬಳಕೆಯಾಗಿರುವ ವಚನಗಳ ಸಂಖ್ಯೆಯನ್ನು ಖಚಿತವಾಗಿ ಸಂಗ್ರಹಿಸಿದ್ದೇನೆ. ಇದರೊಂದಿಗೆ ಆ ಟಿಪ್ಪಣಿ ಕೊಡಲಾಗಿದೆ. ಅದರ ಪ್ರಕಾರ ಸುಮಾರು ಇಪ್ಪತ್ತೇಳು ಬಸವಾದಿ (೨೭) ಪ್ರಮುಖ ಶರಣರು, ನೂರಾ ಅರವತ್ತೊಂದು ವಚನಗಳಲ್ಲಿ ವೀರಶೈವ, ನಿಜವೀರಶೈವ, ವೀರಶೈವೋತ್ತಮ, ವೀರಶೈವಾಚಾರ, ವೀರಶೈವ ದೀಕ್ಷೆ, ನಿಜ ವೀರಶೈವ ದೀಕ್ಷೆ, ವೀರಶೈವ ಅಷ್ಟಾವರಣ, ಪಂಚಾಚಾರ ಷಡುಸ್ಥಲಯುಕ್ತ ವೀರಶೈವ ಸಿದ್ಧಾಂತ, ಅಂಗಲಿಂಗ ಸಂಬಂಧವನುಳ್ಳ ಕ್ರಿಯಾಜ್ಞಾನ, ವೈರಾಗ್ಯ ಅನುಭಾವಯುಕ್ತವಾದ ನಿರಾಭಾರಿ, ವೀರಶೈವ, ಭಕ್ತಾರಾಧ್ಯ, ಜಂಗಮ ಗಣಂಗಳು, ಪರಮ ವೀರಶೈವ, ಪರಮ ವೀರಶೈವಾಗಮವೇ ಪ್ರಮಾಣ, ಚನ್ನಬಸವಣ್ಣನು ಷಡುಸ್ಥಲ ಸ್ಥಾಪನಾಚಾರ್ಯನಾಗಿ ಪ್ರತಿಷ್ಠೆ ಬಂದನಯ್ಯಾ ಚನ್ನಬಸವಣ್ಣನು ಬಂದನು. ವೀರಶೈವಮಾರ್ಗವನರುಪುವುದಕ್ಕೆ ಬಂದರಯ್ಯಾ ಬಸವಣ್ಣನವರು, ವೀರಶೈವನೆಂಬ ಸಿದ್ಧ, ನಿಜವೀರಶೈವ ಸಂಪನ್ನ, ಘನ ವೀರಶೈವ ಲಿಂಗ ಪೂಜೆ, ವೀರಶೈವ ಗುರು, ವೀರಶೈವ ಗುರು ಮಂತ್ರೋಪದೇಶ, ತೃಣಪುರುಷನಿಗೆ ಬಸವಣ್ಣ ವೀರಶೈವ ದೀಕ್ಷೆಯನಿತ್ತನು.

ಯೋ ಹಸ್ತಪೀಠೇ....ಸಂಪೂಜ್ಯತ್ಯಂಗ ಸವಿಶೀರ
ಶೈವ ಲಿಂಗಾಂಗ ಸಂಬಂಧಿಯೇ ವೀರಶೈವ,
ಕಿಮಸ್ತಿನೋ............ವೀರಶೈವಾನ್ವಯೇ ಪರಮಂ ದುರ್ಲಭಂ||

ಸಕಲ ಪ್ರಾಣಿಗಳಲ್ಲಿ ವೀರಶೈವನೇ ಸರ್ವೋತ್ತಮನಯ್ಯಾ. ಇದೀಗ ವೀರಶೈವ ಲಕ್ಷಣ ಶೈವಕ್ಕೂ, ವೀರಶೈವಕ್ಕೂ ಮಹದಂತರ, ಶೈವವಾದ ಮೂರು ವೀರಶೈವ, ಸಾಮಾನ್ಯ ವೀರಶೈವ ವಿಶೇಷ ವೀರಶೈವ ನಿರಾಭಾರಿ ವೀರಶೈವ, ಹಿಂದೆ-ಮುಂದೆ ಹಾರದಿಪ್ಪುದೆ ವೀರಶೈವ, ವೀರಶೈವದಲ್ಲಿ ನಿಷ್ಠೆ ಪ್ರಾಣಲಿಂಗ ಸಂಬಂಧ ವೀರಶೈವ ಸಿದ್ಧಾಂತ ಗುರು, ಅಭೇದ್ಯ ರೂಪ ಚನ್ನಬಸವಣ್ಣನಾಗಿ, ವೀರಶೈವವೆಂಬುದಲಕ್ಷಿಸಿ ಷಡುದರ್ಶನಕ್ಕೆ ಸ್ಥಾಪನಾಚಾರ್ಯನಾಗಿ, ಶುದ್ಧ ಸುಶೀಲ ನಿರಾಭಾರಿ ವೀರಶೈವರು, ವೀರಶೈವದ ಬಟ್ಟೆ, ವೀರಶೈವ ನಿರ್ಣಯ ತಿಳಿಯದು. ಅನಾದಿ ವಿಡಿದು ಬಂದ ವೀರಶೈವ ಷಟ್‌ಸ್ಥಲದ ಆಚಾರ, ಅನಾದಿ ಷಟ್ಸ್ಥಲ ನಿರಾಭಾರಿ ವೀರಶೈವ ನಿಜಾಚರಣೆ, ವರವೀರಶೈವ ಸ್ಥಾಪನಾಚಾರ್ಯ ಕೂಡಲ ಸಂಗಮೇಶ್ವರ ಗರ್ಭೋದಯ ಬಸವ ದಂಡನಾಥ, ಷಟ್ಸ್ಥಲ ಸ್ಥಾಪನಾಚಾರ್ಯ, ಪಂಚಾಚಾರ ಪ್ರಥಮನಾಯಕ, ಅನಾದಿ ಸಂಸಿದ್ಧ ವೀರಶೈವಾಚಾರ ಸಂಪತ್ತು, ವೀರಶೈವ ಮತ, ಶಿವಲಿಂಗ ಧಾರಕ ಮತದವರು, ನಿಜ ನಿರಾಭಾರಿ ವೀರಶೈವ ಸತ್ಕ್ರಿಯ ಸಮ್ಯ ಜ್ಞಾನಾನುಭಾವ, ಇತ್ಯಾದಿ ಅಂಶಗಳನ್ನು ಪೂರ್ವಾಗ್ರಹ ಪೀಡಿತರಾಗದೆ ಮನದಂದಾಗ ಬಸವಾದಿ ಶರಣರು ಒಪ್ಪಿ ಅಪ್ಪಿಕೊಂಡು ಆಚರಿಸಿ, ಅನುಭಾವಪೂರ್ಣವಾಗಿ ಪ್ರತಿಷ್ಠಾಪಿಸಿ ಉದ್ಧರಿಸಿದ್ದು ಪರಮ ವೀರಶೈವ ಧರ್ಮ ಸಿದ್ಧಾಂತವೆಂಬುದು ಸುಸ್ಪಷ್ಟ. ಶಿವಾನುಭವ ಚಕ್ರವರ್ತಿ ಮಗ್ಗೆಯ ಮಾಯಿದೇವರು ಬಸವಣ್ಣನವರನ್ನು 'ವೀರಶೈವ ನಿರ್ಣಯ ಪರಮಾವತಾರ' ಎಂದಿರುವುದನ್ನು ಇಲ್ಲಿ ಗಮನಿಸಬೇಕು.

ಇನ್ನು ಲಿಂಗಾಯತವೆಂಬ ಪದ ಅಲ್ಪವಿರಾಮ, ರೂಢನಾಮ, ಗುಣವಾಚಕವೇ ವಿನಃ ಪೂರ್ಣಾರ್ಥದ ಲಿಂಗಾಯತ ಧರ್ಮವಲ್ಲ. ಅಂಗದ ಮೇಲೆ ಲಿಂಗ ಸ್ವಾಯತವಾದಡೇನು ಲಿಂಗವಂತ. ಭಕ್ತನಲ್ಲದೆ ಪ್ರಾಣಲಿಂಗ ಸ್ವಾಯತ ವೀರಶೈವನಪ್ಪನೆ, ಇಷ್ಟಲಿಂಗದಲ್ಲಿ ವಿಶ್ವಾಸಬಲಿದಡೆ ಆಯತ ಲಿಂಗ, ಭಾವಮನೋವೇದ್ಯ ಸ್ವಾಯತ ಲಿಂಗ, ಅನುಪಮ ಭಾವ ಪರಿಣಾಮಸನ್ನಿಹಿತಲಿಂಗ, ಆಯತ ಲಿಂಗದಲ್ಲಿ ಆಚಾರ..., ಸ್ವಾಯತ ಲಿಂಗದಲ್ಲಿ ವಿಚಾರವಂತರಿತು, ಸನ್ನಿಹಿತಲಿಂಗದಲ್ಲಿ ಅನುಭಾವವರಿತು, ಲಿಂಗತ್ರಯಂಗಳು, ತನ್ನುತ್ರಯಂಗಳ ಮೇಲೆ ಆಯತ ಸ್ವಾಯತ ಸನ್ನಿಹಿತನೆನಿಸಿದಲ್ಲಿ ಶರಣನು ಷಡಂಗಯೋಗಿ ಪರಮಾತ್ಮನೆನಿಸುವನು, ಆಯತದಲ್ಲಿ ತನುಗುಣರಾಹಿತ್ವ, ಸ್ವಾಯತದಲ್ಲಿ ಭೋಗ ಭೂಕ್ಷಣಂಗಳ ಕಳೆದು ಅನೃತ, ಅಸಹ್ಯ, ಅಸತ್ಯ, ಋಣ ವಂಚನೆಗಳಿಲ್ಲದಿರುವುದು. ಸ್ವಾಯತದಲ್ಲಿ ಮನೋವಿಕಾರದಳಿವು, ಸರ್ವೇಂದ್ರಿಯ ಸಾಧನ, ಅನ್ಯಭಿನ್ನ ರುಚಿ ಇಲ್ಲದೆ ಭ್ರಮೆಯಿಲ್ಲದಿರುವುದು, ಸನ್ನಿಹಿತ ತನ್ನರು ಹಿನ ಕುರುಹನರಿವ ನಿಜಸಾಧ್ಯವಾದುದು ಆಯತಲಿಂಗದಲ್ಲಿ ... ಭಕ್ತ, ಸ್ವಾಯತ ಲಿಂಗದಲ್ಲಿ ಆಗಾಗಿಯುಕ್ತ, ಸನ್ನಿಹಿತ ಲಿಂಗದಲ್ಲಿ ಆಗಾಗಿ ಶರಣ. ಲಿಂಗಾಯತ ದೀಕ್ಷೆ. ಆಚಾರ್ಯನು ಶಿಷ್ಯನಿಗೆ ಈಯುವ ಲಿಂಗವ ತಾನು ಅರ್ಚನೆಮಾಡಿ ಶಿಷ್ಯನಿಗೆ ನೋಡಿಸುವುದು. ಲಿಂಗವಂತ ಸ್ವರೂಪವನ್ನರಿಯಲು ವಚನ ಸಂಪುಟ ಆರರಲ್ಲಿ ಉರಿಲಿಂಗ ಪೆದ್ದಿಯ ವಚನಗಳನ್ನು ಅವಲೋಕಿಸಿ, ವೀರಶೈವದ ಪೂರ್ಣ ಮಾಹಿತಿಗಾಗಿ ವಚನ ಸಂಪುಟ ಒಂಬತ್ತರಲ್ಲಿ ಪರಿಶಿಷ್ಟದಲ್ಲಿ ಶಾಂತವೀರಾಂಕಿತ ಪಾರಮೇಶ್ವರ, ವೀರಾಗಮ, ವಾತುಲತಂತ್ರಕಾಮಿಕಾಗಮ ಇತ್ಯಾದಿ ಆಗಮಾಧಾರಿತ ವಚನಗಳನ್ನು ತಪ್ಪದೆ ಅವಲೋಕಿಸಲು ವಿನಂತಿ.

ಈ ಎಲ್ಲ ಅಂಶಗಳನ್ನು ಪರ್ಯಾವಲೋಚಿಸಿದಾಗ 'ಲಿಂಗಾಯತ' ಎಂಬುದು ೨೧ ದೀಕ್ಷೆಗಳಲ್ಲಿನ ಲಿಂಗಾಯತ ದೀಕ್ಷೆ, ಲಿಂಗಸ್ವಾಯತ ದೀಕ್ಷೆ ಎಂಬುದು ಪರಿಪೂರ್ಣ ಸ್ವರೂಪ ವೀರಶೈವ ಧರ್ಮ ಸಿದ್ಧಾಂತ ನಿಚ್ಚಣಿಕೆಯನೇರುವ ಹಂತವೆಂಬುದು ವಿದಿತವಾಗುತ್ತದೆ. ಅಲ್ಲದೆ ಲಿಂಗಾಯತವು ಆಚಾರಗುಣ ಜ್ಞಾನ ಸಂಚಯದ ಸನ್ಮಾರ್ಗದ ಶ್ರೇಣಿ ಮಾತ್ರವು ಎಂಬುದು ಕನ್ನಡಿಯ ಪ್ರತಿಬಿಂಬದಂತೆ ಸಹಜದ ಪ್ರತೀಕ. ಪೂರ್ಣವಲ್ಲ ಎಂಬುದನ್ನು ಮನಗಾಣಬೇಕು.

ಇನ್ನು ಹಿಂದು ಎಂಬ ವಿಚಾರ ಸಂಕಿರಣ, ಹಿಂದೂ ದೇಶ, ಅಥವಾ ಭರತಖಂಡದಲ್ಲಿ ನಿವಾಸಿಯಾಗಿರುವ ಹಿಂದೂ ಮುಸ್ಲಿಂ, ಕ್ರೈಸ್ತ, ಜೈನ, ಬೌದ್ಧ, ಪಾರಸಿ, ಆಂಗ್ಲ, ಇತ್ಯಾದಿ ಸಮಸ್ತರೂ ಹಿಂದೂ ಅಥವಾ ಭಾರತೀಯರೇ, ಭೌಗೋಳಿಕವಾಗಿ. ಹಿಂದೂ ಧರ್ಮವೆಂಬುದಾವುದೂ ಬೇರಾಗಿ ಯಾವುದೂ ಇಲ್ಲ. ಮೇಲ್ಕಂಡ ಎಲ್ಲ ಧರ್ಮ ಪಂಥಗಳ ಒಕ್ಕೂಟವೇ ಹಿಂದೂ ಧರ್ಮ. ಹೀಗೆಂದು ಅಭಿಮಾನಿ ಹಿಂದೂ-ವೀರಶೈವವೆಂಬುದು ಸರ್ವಕಾಲಿಕ ಸತ್ಯ. ವೇದಗಳಲ್ಲಿನ ಕರ್ಮಕಾಂಡದಲ್ಲಿನ ಯಜ್ಞಾದಿ ಪಶುಬಲಿ ಮುಂತಾದುವನ್ನು ವೀರಶೈವ ಧರ್ಮ ವಿರೋಧಿಸುತ್ತದೆಯಾಗಲೀ, ಜ್ಞಾನ ಕಾಂಡದಲ್ಲಿನ ಉತ್ತಮಾಂಶಗಳನ್ನಲ್ಲ. ವೇದಾಗಮಾದಿಗಳು ಹೇಳಿದಂತೆ ನಡೆವುದು-ಮೀರಿ ನಡೆಯಲಾಗದು. ಮುಕ್ತಿಯನ್ನೈದುವಾತ ವೇದಾಗಮಂಗಳ ನರಕವಂಗಲ್ಲದೆ ವೀರಶೈವ ಅಳವಡದು ಎಂಬ ಅಂಶಗಳನ್ನಲ್ಲದೆ, ವಚನ ವಾಙ್ಮಯದಲ್ಲಿ ಹೇರಳವಾಗಿ ವೇದಾಗಮ ಉಪನಿಷತ್ ಪುರಾಣಗಳಲ್ಲಿ ಸಂಸ್ಕೃತಗಳ ಶ್ಲೋಕಗಳನ್ನು ವೀರಶೈವ ರತ್ನ ಪ್ರತಿಪಾದನೆಗಾಗಿ ವಿಪುಲವಾಗಿ ಸಂಯೋಜಿಸಿದ್ದಾರೆಂಬುದನ್ನು, ಚನ್ನಬಸವಣ್ಣ, ಉರಿಲಿಂಗ ಪೆದ್ದಿ, ಸಕಲಾಗಮ ಶಿಖಾಮಣಿ ಬಾಲಸಂಗಯ್ಯನ ವಚನಗಳಲ್ಲಿ ಸಮೃದ್ಧವಾಗಿ ಕಾಣಬಹುದು. ಡಾ|| ಎಲ್. ಬಸವರಾಜು ಅವರು 'ಹಲವರು ತಿಳಿದಿರುವಂತೆ ಬಸವಣ್ಣನವರು ಹಿಂದೂ ಧರ್ಮವನ್ನು ದ್ವೇಷಿಸಲಿಲ್ಲ. ವೇದಗಳನ್ನು ಅವರು ಸಂಪೂರ್ಣವಾಗಿ ತೆಗಳಲಿಲ್ಲ. ಅವನ್ನು ತಮ್ಮ ಜಾತ್ಯತೀತ ರಾಷ್ಟ್ರದ ಕಲ್ಪನೆಯ ಹಿನ್ನೆಲೆಯಲ್ಲಿ ವಿಮರ್ಶಾತ್ಮಕವಾಗಿ ಸ್ವೀಕರಿಸಿಯೇ ಇದ್ದರು. ಬಸವಣ್ಣನವರು ವೇದಗಳನ್ನೇ ಅಲ್ಲ, ಶಿವಾಗಮಗಳನ್ನೂ, ಜನಪರವಾದ ತಮ್ಮ ಪೂರ್ಣ ದೃಷ್ಟಿಗನುಸಾರವಾಗಿ ಕಟುವಾದ ವಿಮರ್ಶೆಗೊಳಪಡಿಸಿದ್ದರು. ಭಾರತೀಯ ಜನತೆಯನ್ನು ಜಾತಿಯಿಂದ ಭಿನ್ನಭಿನ್ನವಾಗಿ ವಿಭಜಿಸುವ ಅನಾಗರೀಕ ನಿಲವು ಎಲ್ಲೇ ಇರಲಿ ಅದನ್ನವರು ಬಲವಾಗಿ ವಿರೋಧಿಸಿದರು. ಮಿಕ್ಕಂತೆ ಅವರಿಗೆ ವೇದ ಉಪನಿಷತ್ತುಗಳ ಬಗ್ಗೆ ಬೇಕಾದಷ್ಟು ಗೌರವವಿದ್ದೇ ಇತ್ತು. ಹೀಗಾಗಿ ಅವರು ಹಿಂದೂ ಧರ್ಮವನ್ನು ಬದಲಾಯಿಸಲು ಬಂದವರೇ ಹೊರತು ಹೊಸದೊಂದು ಧರ್ಮವನ್ನು ಸ್ಥಾಪಿಸಲು ಬಂದವರಲ್ಲ. ಕೆಲವರು ಇತ್ತೀಚೆಗೆ ಈ ಶರಣಧರ್ಮವು ಹಿಂದೂ ಧರ್ಮದಿಂದ ತೀರ ಭಿನ್ನವಾದುದೆಂಬಂತೆ ವಾದ ಮಾಡುತ್ತಿರುವರು. ಅದು ಸರಿಯಲ್ಲ' ಎಂದಿದ್ದಾರೆ. (ಬಸವಣ್ಣನವರ ಷಟ್‌ಸ್ಥಲದ ವಚನಗಳು (ಸಹಚಿಂತನ ಸಹಿತ) ಪುಟ VII.



"........... ಇತ್ತೀಚೆಗೆ ಭಾಷಾ ಅಲ್ಪಸಂಖ್ಯಾತರ ಹಿತಸಂರಕ್ಷಣೆಯ ಸೋಗಿನಲ್ಲಿ ಸ್ವಂತ ಭಾಷಾ ಜನತೆಗೆ ಆಗುತ್ತಿರುವ ಅನ್ಯಾಯಗಳು ಅಷ್ಟಿಷ್ಟಲ್ಲ........ ಕನ್ನಡ ರಾಜ್ಯದ ಆಡಳಿತ ಶಿಕ್ಷಣ ವ್ಯವಹಾರ ಭಾಷೆ ಕನ್ನಡ ಎಂದು ರಾಜ್ಯ ಸರ್ಕಾರ ಕೂಡಲೇ ಘೋಷಿಸಬೇಕು. ಹಿಂದಿಯಾಗಲಿ, ಇಂಗ್ಲಿಷಾಗಲಿ ಈ ಸ್ಥಾನದಲ್ಲಿ ನಿಲ್ಲಲು ಸಾಧ್ಯವಿಲ್ಲ. ತಮ್ಮದಲ್ಲದ ಬೆಳಗಾವಿಯನ್ನು ಮಹಾರಾಷ್ಟ್ರಕ್ಕೆ ಸೇರಿಸಲು ಮರಾಠಿಗರು ನಡೆಸುತ್ತಿರುವ ಪ್ರಯತ್ನಗಳನ್ನು ನೋಡುತ್ತ ರಾಜ್ಯ ಸರ್ಕಾರ ತಾಟಸ್ಥ್ಯ ಧೋರಣೆ ತಳೆದಿರುವುದು ವಿಷಾದಕರ............ ತಪೋಭೂಮಿಯಾದ ಈ ಕನ್ನಡ ನಾಡು ಜನತೆಯ ತಪಸ್ಸಿನಿಂದಲೇ ವರ್ಧಿಸಬೇಕು..........."

ಅ.ನ.ಕೃ.

# ಅರವತ್ತುಮೂರು ಪುರಾತನ ಶರಣರು

(ಕಳೆದ ಸಂಚಿಕೆಯಿಂದ)



- ಡಾ. ಬಿ.ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ, ಬೆಂಗಳೂರು.

## ೪೮. ಕಣಂಬುಲ್ಲ ನಂಬಿ

ಚೋಳ ಮಂಡಲದಲ್ಲಿ ಕಣಂಬೂರಿನಲ್ಲಿ ಕಣಂಬುಲ್ಲನಂಬಿ ಎಂಬ ಮಹಾ ಶಿವಭಕ್ತ. (ಕಡವಲನಂಬಿ) ಈತ ಬಡವನಾದರೂ ಹರಗುರು, ಚರಮೂರ್ತಿಗಳ ಸೇವೆ ಮಾಡುತ್ತಿದ್ದ. ಇಡೀ ಜಗತ್ತಿಗೆ ಬೆಳಕು ನೀಡುತ್ತಿರುವ ಶಿವನಿಗೆ ಸದಾ ದೀಪದಿಂದ ಬೆಳಕು ಪ್ರಜ್ವಲಿಸಬೇಕೆಂದು ಸಹಸ್ರಾರು ತುಪ್ಪದ ದೀಪ ಹಚ್ಚಿ ನೋಡಿ ಆನಂದಿಸುತ್ತಿದ್ದ. ಹೀಗೆ ಕೆಲವು ದಿನ ಮಾಡಲು ಬಡತನ ಬಂತು. ಕೊನೆಗೆ ಹುಲ್ಲಮಾರಿ, ಅದರಿಂದ ಬಂದ ಹಣದಿಂದ ದೀಪ ಹಚ್ಚಲಾರಂಭಿಸಿದ.

ಒಮ್ಮೆ ಅರಣ್ಯಕ್ಕೆ ಹೋಗಿ ಹುಲ್ಲು ತರುವುದು ತಡವಾಯ್ತು. ಹುಲ್ಲಿನ ವ್ಯಾಪಾರವಾಗಲಿಲ್ಲ. ರಾತ್ರಿಯಾಗುತ್ತಾ ಬಂತು. ಭಗವಂತನಿಗೆ ಕತ್ತಲಾಯಿತಲ್ಲಾ, ಏನು ಮಾಡಲಿ ಎಂದು ಯೋಚಿಸಿ, ಹುಲ್ಲನ್ನೇ ಹಚ್ಚಿ ಬೆಳಕು ಮಾಡಿದರಾಯ್ತು ಎಂದು ನಿಶ್ಚಯಿಸಿದ. ಮಧ್ಯರಾತ್ರಿವರೆಗೆ ಹುಲ್ಲು ಉರಿದು ಮುಗಿಯಿತು. ಉಟ್ಟ ಬಟ್ಟೆಯನ್ನು ಉರಿಸಿದ. ಕೊನೆಗೆ ತನ್ನ ಕೂದಲಿಗೆ ಬಟ್ಟೆ ಕಟ್ಟಿ ಉರಿಸಲಾರಂಭಿಸಿದ. ಆನಂದದಿಂದ ಕುಣಿಯತೊಡಗಿದ. ತಲೆ ಸಿಡಿಯುವಂತಾಯ್ತು. ಆಗ ಶಿವ ಪ್ರತ್ಯಕ್ಷನಾಗಿ ಆತನಿಗೆ ಮೊದಲಿದ್ದ ಕೂದಲನ್ನು ಕರುಣಿಸಿ ಕೈಲಾಸಕ್ಕೆ ಕರೆದೊಯ್ದು ಗಣ ಪದವಿ ನೀಡಿದ.

## ೪೯. ಎಳೆಯಾಂಡ ಗುಡಿಮಾರ

ಚೋಳ ದೇಶದ ಇಳೆಯಾಂಡ ಗುಡಿ ಎಂಬುದು ಒಂದು ಸಣ್ಣ ಗ್ರಾಮ. ಅಲ್ಲಿ ಎಳೆಯಾಂಡ ಗುಡಿಮಾರ (ಇಳೆಯಾಂಡ ಗುಡಿಮಾರ) ಎಂಬ ಶೂದ್ರ ಕೃಷಿ ಕಾಯಕ ಮಾಡಿಕೊಂಡು ಜೀವನ ಸಾಗಿಸುತ್ತಿದ್ದ. ಈತ ಮಹಾ ಭಕ್ತ. ಜಂಗಮ ಸೇವೆಯಲ್ಲೇ ಈತ ತನ್ನ ಆಯಸ್ಸನ್ನೆಲ್ಲಾ ಕಳೆದಿದ್ದ. ತನ್ನ ಆಸ್ತಿಯನ್ನೆಲ್ಲಾ ಮಾರಿ ಬಡವನಾದ. ಆದರೂ ಜಂಗಮ ಸೇವೆಗೆ ಮಾತ್ರ ಚ್ಯುತಿಬಾರದಂತೆ ನೋಡಿಕೊಳ್ಳುತ್ತಿದ್ದ.

ಶಿವ ಈತನ ಪರೀಕ್ಷೆಗೆ ಬಂದ. ವಿಪರೀತ ಮಳೆಗರೆದ. ಅದರಲ್ಲಿ ನೆನೆದು ಬಂದು ನಿಂತ. ಆಗ ಇಳೆಯಾಂಡ ಗುಡಿಮಾರ ತಾನು ಹೊದ್ದಿದ್ದ ಕಂಬಳಿಯನ್ನು ಹೊದಿಸಿದ.

ಆದರೂ ಜಂಗಮ ಚಳಿಯಲ್ಲಿ ನಡುಗುತ್ತಿದ್ದ. ಬೆಂಕಿ ಕಾಯಿಸಿದರೆ ಸರಿ ಎಂದು ಯೋಚಿಸಿ ಮನೆಯ ಗಳು, ಜಂತಿಗಳನ್ನೇ ಉರಿಸಿದ. ಆಮೇಲೆ ಆ ಜಂಗಮ "ಹೊಟ್ಟೆ ಹಸಿವಾಗುತ್ತಿದೆಯಲ್ಲಾ ಇಳೆಯಾಂಡ ಗುಡಿಮಾರ" ಎಂದ. ಮನೆಯಲ್ಲಿ ಏನೂ ಇಲ್ಲ, ಏನು ಮಾಡುವುದು ಎಂದು ಯೋಚಿಸಿದ. ಗದ್ದೆಗೆ ಬಿತ್ತಲು ಬತ್ತವನ್ನು ನೀರಿಗೆ ಹಾಕಿದ್ದ. ಅದು ಮೊಳಕೆಯೊಡೆದಿತ್ತು. ಅದನ್ನೇ ಬಿಡಿಸಿ ಅಡಿಗೆ ಮಾಡಲು ಅಣಿಯಾದರು. ಮಗನನ್ನು ಸೊಪ್ಪು ತರಲು ಕಳುಹಿಸಿದ್ದ. ಮಗ ಸರ್ಪ ಕಚ್ಚಿ ಸತ್ತ. ತಂದೆ ಮಗ ಬರದಿರಲು ಹುಡುಕಿಕೊಂಡು ಹೋದ. ಮಗ ಸತ್ತಿದ್ದುದು ಕಂಡಿತು. ಇನ್ನು ವಿಷಯ ಹೇಳಿದರೆ ಜಂಗಮಾತಿಥ್ಯ ನಿಲ್ಲುತ್ತದೆ ಎಂದು ಹೇಳಿ ಅಡಿಗೆ ಮಾಡಿ ಊಟಕ್ಕೆ ಬಡಿಸಿದ.

ಆಗ ಜಂಗಮರು "ಊಟಕ್ಕೆ ನಿನ್ನ ಮಗನನ್ನೂ ಕರೆತಾರಮ್ಮಾ" ಎಂದರು. ಆಕೆ ಮಗನನ್ನು ಕರೆಯಲು ಮಗ ಓಡೋಡಿ ಬಂದ. ಇಳೆಯಾಂಡ ಗುಡಿಮಾರನಿಗೆ ಅಚ್ಚರಿಯಾಯಿತು. ಶಿವನು ತನ್ನ ನಿಜ ರೂಪ ತೋರಿ ಸತಿ, ಸುತರ ಸಮೇತ ಇಳೆಯಾಂಡ ಗುಡಿಮಾರನನ್ನು ಕೈಲಾಸಕ್ಕೆ ಕರೆದೊಯ್ದು ಗಣ ಪದವಿ ನೀಡಿದ.

## ೫೦. ಅಡವಘೆಯ ಪೆರುಮಾಳೆಯರು

ಚೋಳಮಂಡಲದಲ್ಲಿ ತಿರುನಾಗ ಪಟ್ಟಣ (ನಾಗಪಟ್ಟಣ) ಅಲ್ಲಿ ಅಡವಘೆಯ ಪೆರುಮಾಳೆಯ ರಾಜ ಸದಾ ಲಿಂಗಪೂಜಾ ನಿರತನಾಗಿದ್ದ. ಮಾಹೇಶ್ವರರಿಗೆ ಅನೇಕ ಸತ್ಕಾರ್ಯ ಮಾಡುತ್ತಿದ್ದ. ಅದೇ ಪಟ್ಟಣದಲ್ಲಿ ಧರ್ಮಪಾಲನೆಂಬ ವೈಶ್ಯ ರತ್ನಾಕರನೆಂಬಾತ ಪೆರುಮಾಳರ ಮಿತ್ರನಾಗಿ, ಲಿಂಗ ಜಂಗಮರಿಗೆ ದ್ರವ್ಯ ಕೊಡುತ್ತಿದ್ದ. ಒಮ್ಮೆ ಚೋಳಮಂಡಲಕ್ಕೆ ಬರಗಾಲ ಬಂತು. ಆಗ ಧರ್ಮಪಾಲ ಜನರಿಗೆ ದಾನ ನೀಡಿ ಅವರನ್ನು ರಕ್ಷಿಸಿದ. ಈತನ ಖ್ಯಾತಿ ಎಲ್ಲಾ ಕಡೆ ಹರಡಿತು. ಇದನ್ನು ನೋಡಿ ರಾಜನಾದವನಿಗೆ ಇವರನ್ನೆಲ್ಲಾ ತೃಪ್ತಿಪಡಿಸಲಾಗಲಿಲ್ಲವಲ್ಲಾ ಎಂದು ಒಂದು ರೀತಿ ನಾಚಿಕೆಯಾಯಿತು. ಆತನಲ್ಲಿಗೆ ಬಂದು,

"ಧರ್ಮಪಾಲ ನಾನೊಂದು ಕೇಳಬೇಕೆಂದಿರುವೆ, ನೀನು ಕೊಡುವುದಾದರೆ ಕೇಳುವೆ" "ಅಗತ್ಯವಾಗಿ ಕೇಳು ಪ್ರಭು"

"ನಾನು ನನ್ನ ರಾಜ್ಯವನ್ನೇ ನಿನಗೆ ಧಾರೆ ಎರೆದುಕೊಡುವೆ. ನೀನು ಮೂರು ಸಹಸ್ರ ಕಣಜ ಭತ್ತವನ್ನು ದಾನ ಮಾಡಿದ ಪುಣ್ಯವನ್ನು ನನಗೆ ಕೊಡಬೇಕು."





"ಮಹಾ ಪ್ರಸಾದ" ಎಂದು ಧಾರೆ ಎರೆದು ಕೊಟ್ಟ. ಪೆರುಮಾಳರು ವೈರಾಗ್ಯ ತಾಳಿ ದೇಶಾಂತರ ಹೊರಟರು. ಆತನ ವೈರಾಗ್ಯಕ್ಕೆ ಮೆಚ್ಚಿದ ಶಿವ ಈತನಿಗೆ ಪರಮ ಪದವಿಯನ್ನಿತ್ತ. ಧರ್ಮಪಾಲನ ತ್ಯಾಗ ಮನೋಭಾವಕ್ಕೆ ಮೆಚ್ಚಿ ಗಣಪದವಿ ನೀಡಿದ.

## ೫೧. ಇಹಃ ಪಗೆಯಾಂಡ [ಸಿಂಧುಬಲ್ಲಾಳ]

ಚೋಳಮಂಡಲದಲ್ಲಿ ಕಾವೇರಿ ನದಿ ತೀರದ ಪುಗಾರ್ ಎಂಬ ನಗರದಲ್ಲಿ ಇಹಃ ಪಗೆಯಾಂಡ ಎಂಬ ರಾಜ ರತ್ನಾವತಿಯನ್ನು ವಿವಾಹವಾಗಿ ಆಳುತ್ತಿದ್ದ. ಆತನಿಗೆ ಅಹಂಕಾರವಿರಲಿಲ್ಲ. ಅತಿ ಭಕ್ತ. ಈತ ದೇವಾಲಯ ಕಟ್ಟಿಸುವುದು, ಸಮಾಜ ಕಾರ್ಯಗಳಲ್ಲಿ ನಿರತನಾಗಿದ್ದ. ಮಹೇಶ್ವರನನ್ನು ತೃಪ್ತಿ ಪಡಿಸುತ್ತಿದ್ದ. ಅನೇಕ ಮಹೇಶ್ವರರು ಬಂದು ಹೋಗುತ್ತಿದ್ದರು. ಅವರೆಲ್ಲರ ಇಷ್ಟಾರ್ಥವನ್ನು ಪೂರೈಸುತ್ತಾ ಇದ್ದ. ಈತನ ಕೀರ್ತಿ ಕೈಲಾಸಕ್ಕೂ ಮುಟ್ಟಿತು. ಈತನನ್ನು ಪರೀಕ್ಷಿಸಲು ಶಿವ ಮುನಿವೇಶ ಧರಿಸಿ ಬಂದ. ರಾಜ ಈತನನ್ನು ಪೀಠದ ಮೇಲೆ ಕುಳ್ಳಿರಿಸಿ ಸತ್ಕರಿಸಿದ. ಮುನಿ ಹೇಳಿದ,

"ಮಹಾರಾಜ ನಿನ್ನ ಕೀರ್ತಿ ನೋಡಲು ಬಂದೆ"

"ನಿಮಗೇನು ಬೇಕು ಕೇಳಿರಿ'

"ನಿನ್ನ ಅಂತಃಪುದಲ್ಲಿನ ರಾಣಿಯರನ್ನೆಲ್ಲಾ ಕರೆ"

"ಅಪ್ಪಣೆ"

ಎಂದು ಎಲ್ಲರನನೂ ಕರೆಸಿದ. ರತ್ನಾವತಿ ಸೌಂದರ್ಯದ ಖಣಿಯಾಗಿದ್ದಳು. ಮುನಿಯನ್ನು ನೋಡಿ,

"ಈತನು ಸಾಕ್ಷಾತ್ ಈಶ್ವರನೇ, ಸಾಮಾನ್ಯ ಮಾನವರಿಗೆಲ್ಲಿಂದ ಈ ಸೌಂದರ್ಯ ಬಂದೀತು?" ಎಂದುಕೊಂಡಳು.

ರಾಜ ಹೇಳಿದ - "ಇವರಲ್ಲಿ ಬೇಕಾದವರನ್ನು ಆರಿಸಿಕೊಳ್ಳಿ" ಎಂದು.

"ರತ್ನಾವತಿಯನ್ನು ಕೊಡು, ಆದರೆ ನನ್ನೂರಿಗೆ ಕಳುಹಿಸಿಕೊಡಲು ನೀನೇ ಬರಬೇಕು"

ಅಗತ್ಯವಾಗಿ ಖಡ್ಗ ಹಿಡದು ಬರುವೆ ಎಂದ. ರಾಜನ ಕಡೆಯವರು ರಾಜನಿಗೆ ಬುದ್ಧಿ ಕೆಟ್ಟಿದೆ ಯಾವನೋ ತಿರುಕ ಬಂದು ಕೇಳಿದರೆ ಹೀಗೆ ಮಾಡುವುದುಂಟೆ ಎಂದು ರಾಣಿಯನ್ನು ಬಿಡಿಸಿಕೊಂಡು ಬರಲು ಹಿಂಬಾಲಿಸಿದರು. ಅವರು ತಂದ ಆಯುಧದಿಂದಲೇ ಅವರ ರುಂಡಗಳನ್ನು ಚೆಂಡಾಡಿದ. ಚದುರಂಗ ಬಲವನ್ನೇ ನಿರ್ಮೂಲ ಮಾಡಿದ.

ರಾಜ ಹೇಳಿದ "ಇನ್ನು ಯಾವ ವಿಪತ್ತೂ ಇಲ್ಲ, ಪ್ರಯಾಣ ಮಾಡಿರಿ" ಎಂದು.

"ಎಲೈ ಭಕ್ತಾ ಬೇಗ ಬಾ" ಎಂದ. ಕುದುರೆಯ ಮೇಲೆ ರತ್ನಾವಳಿ ಮಾತ್ರ ಇದ್ದಳು, ಅದರ ಮೇಲೆ ಆ ಮುನಿ ಇಲ್ಲದಿರುವುದನ್ನು ನೋಡಿ ದೊಪ್ಪನೆ ಬಿದ್ದ. ಆಗ ಶಿವ ತನ್ನ ನಿಜರೂಪ ತೋರಿ, ಸಿಂಧು ಬಲ್ಲಾಳನ ತ್ಯಾಗಕ್ಕೆ ಮೆಚ್ಚಿ ಶಿವಸಾಯುಜ್ಯ ನೀಡಿದ.

## ೫೨. ಮೆರೆಮಿಂಡ ದೇವರು

ಚೋಳಮಂಡಲದ ತಿರುವಾರೂರು. ಅಲ್ಲಿ ಮೆರೆಮಿಂಡ ದೇವರೆಂಬ ಮಾಹೇಶ್ವರರು ತಿರುವಾರೂರೇಶ್ವರನ ಭಕ್ತರ ಬಯಕೆಯನ್ನು ಪೂರೈಸುವರೆಂಬ ಖ್ಯಾತಿ ಪಡೆದಿದ್ದರು. ತಿರುವಾರೂರೇಶ್ವರನ ತೇರಿನ ದಿನ ಮೆರೆಮಿಂಡ ದೇವರನ್ನು ಜಾತ್ರೆಯ ಯಾವ ಲೋಪವೂ ಬರದೆ ಚೆನ್ನಾಗಿ ಮಾಡಬೇಕೆಂದು ನಮಸ್ಕರಿಸುತ್ತಿದ್ದರು. ನಂಬಿಯಣ್ಣ ಭಕ್ತ, ಮೆರೆಮಿಂಡದೇವರನ್ನು ಅಲಕ್ಷಿಸಿ ದೇವಾಲಯದ ಒಳಹೊಕ್ಕ. ಮೆರೆಮಿಂಡ ದೇವರು "ಇವನಾರು?" ಎಂದು ಪ್ರಶ್ನಿಸಿದರು.

"ಈತ ಸೌಂದರನಂಬಿ. ಶಿವನೇ ಈತನ ತಂದೆ. ಪ್ರತಿದಿನ ಈತನಿಗೆ ಪಡಿಹೊನ್ನು ಕೊಡುತ್ತಾನೆ. ಈತ ನಾಯನಾರು ಮತ್ತು ಯಸ್ಯ ಜ್ಞಾನದೇವಿಯರ ಮಗ. ಪ್ರತಿದಿನ ತಿರುಪಾಡು ಹಾಡಿ ಪಡಿ ಹೊನ್ನು ಪಡೆಯುತ್ತಾನೆ". "ಇವನದೆಂಥಾ ಭಕ್ತಿ. ಈತನಿಗೂ ಶಿವನು ಸ್ಥಾನ ಕೊಟ್ಟಿದ್ದಾನೆಯೇ? ಆಯುಧ ತೆಗೆಯಿರಿ, ಹೊಡೆಯಿರಿ" ಎಂದ. ಸೌಂದರನಂಬಿ ಗರ್ಭ ಗುಡಿಯ ಬಾಗಿಲು ಹಾಕಿದ. ಶಿವ ನಡುಗಿದ.

"ಶಿವನಿಗೆ ಬಹಿಷ್ಕಾರ" ಎಂದು ಮೆರೆಮಿಂಡ ದೇವರು, ಭಕ್ತರು ಕೂಗಿದರು. ಆಗ ಶಿವ ಸೌಂದರನಂಬಿಗೆ ಹೇಳಿದ,

"ಚೋಳ ದೇಳದಲ್ಲಿ ತಿರುನೀಲ ಕಂಠರೇ ಮೊದಲಾದವರು ಜನಿಸಿದರು. ಅವರ ಚರಿತ್ರೆಯನ್ನು ರಾಗವಾಗಿ ಹಾಡಿದರೆ ನಿನ್ನ ದೋಷ ಪರಿಹಾರವಾಗುತ್ತದೆ" ಎಂದು.

ನಂಬಿಯಂತಹ ಮದೋನ್ಮತ್ತರನ್ನೂ ಬೆಂಬಲಿಸುವ ನೀನೂ ಸಹ ನಂಬಿಯೊಡಗೂಡರುವೆ, ಎಂದು ಡಂಗುರ ಸಾರಿಸಿದ ಮೆರೆಮಿಂಡ ದೇವರು. ನಂಬಿ ಶಿವನ ಆಜ್ಞೆಯಂತೆ ಭಕ್ತರ ಬಗ್ಗೆ ತಿರುಪಾಡುಗಳನ್ನು ಹಾಡಿ ಮೆರೆಮಿಂಡದೇವರನ್ನು ವಂದಿಸಲು ಆವೇಶದಲ್ಲಿ ತಾನು ಮಾಡಿದುದು ತಪ್ಪಾಯಿತು ಎಂದು ತನ್ನನ್ನೇ ಆಹುತಿಕೊಡಲು ಸಿದ್ಧವಾಗಲು ಶಿವನು ಪ್ರತ್ಯಕ್ಷನಾಗಿ ಆತನನ್ನು ಕೈಲಾಸಕ್ಕೆ ಕರೆದೊಯ್ದು ಶಿವ ಪದವಿಯಿತ್ತ.

## ೫೩. ಚಾರಮ [ಚೇರಮ]

ಚೇರಮಂಡಲದ ಕುಡುಂಗ ಮಾರೆಂಬ ಪಟ್ಟಣ [ಕುಡುಗನೂರು] ಚೇರಮನೆಂಬ ರಾಜ ಆಳುತ್ತಿದ್ದ. ಈತ ಶಿವಭಕ್ತ. ಮಹಾದಾನಿ. ತನ್ನ ಹೆಂಡತಿಯಿಂದ ರುದ್ರಾಕ್ಷಿ ಮಹಿಮೆ ತಿಳಿದು ರಾಜ್ಯದ ಎಲ್ಲಾ ಪ್ರಜೆಗಳು ರುದ್ರಾಕ್ಷಿಯನ್ನು ಧರಿಸುವ ಕಟ್ಟಪ್ಪಣೆ ಮಾಡಿದ. ಪ್ರಾಣಿಗಳಾದ ದನ, ಕುದುರೆ, ಆನೆಗಳಿಗೂ ಹಾಕಿಸಿದ್ದ. ಈತ ದಿನವೂ ಗಾನ ಮಾಡುವಾಗ ಶಿವನೃತ್ಯ ಮಾಡುತ್ತಿದ್ದ. ಒಂದು ದಿನ ಗೆಜ್ಜೆಯ ನಾದ ನಿಂತಿತು. ಚಾರಮನಿಗೆ ದುಃಖವಾಯಿತು. ಪೂಜೆ ಪೂರ್ಣವಾಗಲಿಲ್ಲ, "ನಿನ್ನ ಇಷ್ಟವೇನು"? ತಿಳಿಸು ಎನ್ನಲು

(ಮುಂದುವರಿಯುವುದು)

# ಕಾಯಕ-ದಾಸೋಹ

- ಎಸ್. ಪಿನಾಕಪಾಣಿ
ಸಂಪಾದಕ, 'ವಚನಜ್ಯೋತಿ', ವಿಜಯನಗರ, ಬೆಂಗಳೂರು

ಕನ್ನಡ ನಾಡಿನ ಇತಿಹಾಸದಲ್ಲಿ, ಅದೇಕೆ ಭರತ ಖಂಡದ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನದಲ್ಲಿ ಭಕ್ತಿ ಭಂಡಾರಿ ಬಸವಣ್ಣನವರ ಕ್ರಿಯಾಶೀಲ ನಾಯಕತ್ವದಲ್ಲಿ ನಡೆದ ವಚನ ಚಳುವಳಿ. ವಚನ ಚಳುವಳಿಯ ಹಲವು ಲಕ್ಷಣ-ಕಾಣಿಕೆಗಳಲ್ಲಿ ಪರಂಪರಾಗತವಾದ ಸಾಂಪ್ರದಾಯಿಕತೆಯ ನೆಲೆಯಾಗಿದ್ದ ವೇದ-ಶಾಸ್ತ್ರ-ಆಗಮಗಳಿಗೆ ಭಾಷ್ಯಗಳ ನಿರಾಕರಣೆ, ಸನ್ಯಾಸ ಕಲ್ಪನೆಯ ಖಂಡನೆ, ಸ್ತ್ರೀಪುರುಷ ಭೇದ-ಭಾವ ನಿರ್ಮೂಲನೆ, ದೇವ-ದೇವಸ್ಥಾನಗಳ ಕುರಿತ ನವೀನ ಕಲ್ಪನೆ, ಇಹ-ಪರಗಳ ಸಮನ್ವೀಕರಣ, ಸಾಮಾಜಿಕ ಸಮಾನತೆ, ವೃತ್ತಿಗೌರವ, ಕಾಯಕ-ದಾಸೋಹಗಳ ಪರಿಕಲ್ಪನೆ ಇವುಗಳು ಬಹು ಮುಖ್ಯವಾದವುಗಳು.

ಕಾಯಕ ಎಂದರೆ ದೈಹಿಕ ಶಕ್ತಿ ಅಥವಾ ದುಡಿಮೆ ಎಂಬುದು ಸಾಧಾರಣವಾದ ಅರ್ಥ. ಆದರೆ ವಚನಕಾರರ ಪ್ರಕಾರ ಕಾಯಕ ಎಂಬುದು ಸತ್ಯಶುದ್ಧ ಸಾತ್ವಿಕ ಭಾವನೆಯಿಂದ, ಅದು ದೇವರ ಸೇವೆ ಎನ್ನುವ ಮನೋಧರ್ಮದಿಂದ ಮಾಡುವುದು. ಇದು ಸತ್ಯಶುದ್ಧ ಭಾವದಿಂದ ಮಾಡುವ ಕಾಯಕದಲ್ಲಿ ವೃತ್ತಿ ವೃತ್ತಿಗಳ ನಡುವಿನ ಕಂದರವಿರದಿರುವುದು ಶರಣರ ಕಾಯಕ ಸಿದ್ಧಾಂತದಲ್ಲಿ ಸ್ಪಷ್ಟವಾಗುತ್ತದೆ. ವೃತ್ತಿಗಳ ತರ-ತಮ ಭಾವನೆ ತಾನಾಗಿಯೇ ಹೋಗುತ್ತದೆ ಎಂಬ ಸದುದ್ದೇಶ ವಚನಕಾರರದು.

*'ಅಸಿಯಾಗಲಿ ಮಸಿಯಾಗಲಿ ಕೃಷಿಯಾಗಲಿ ವಾಣಿಜ್ಯ ಮುಂತಾದ ಕೃಷಿಯ ಮಾಡುವಲ್ಲಿ ಪಶುಪತಿಗೆಂದೇ ಪ್ರಮಾಡಿಸಿ'* ಎನ್ನುವ ಮೋಳಿಗೆ ಮಾರಯ್ಯನ ವಚನ ಇದರ ಸ್ಪಷ್ಟರೂಪವನ್ನು ನೀಡುತ್ತದೆ.

ವಚನ ಸಾಹಿತ್ಯದ ಷಟ್ಸ್ಥಲದ ಮೊದಲನೆಯ ಸ್ಥಲವಾದ ಭಕ್ತಸ್ಥಲದಲ್ಲಿ ಕಾಯಕದ ಬಗ್ಗೆ ವಿಸ್ತಾರವಾದ ಚಿತ್ರಣವಿದೆ. ದರಿದ್ರ ಸಿರಿವಂತನ ನೆನೆದೊಡೆ ಸಿರಿವಂತನಾಗಬಲ್ಲನೇ? ಎನ್ನುವ ವಚನವಾಣಿ ಕನಸಿನಲ್ಲಿ ಆಶಾಗೋಪುರ ಕಟ್ಟುವ ಮಾನವನಿಗೆ ನೀಡಿದ ತಿಳುವಳಿಕೆಯಾಗಿದೆ.

'ಚಿತ್ತಶುದ್ಧನಾಗಿ ಕಾಯಕ ಮಾಡುವ ಸದ್ಭಕ್ತನ ಮನೆಯಲ್ಲಿ ಎತ್ತ ನೋಡಿದೊಡೆ ಅತ್ತ ಲಕ್ಷ್ಮಿ ತಾನೇ ತಾನಾಗಿಪ್ಪಳು' - ಕಾಯಕದ ಮಹತ್ವವನ್ನು ತಿಳಿಸುತ್ತದೆ.

*ಕಾಯಕದಲ್ಲಿ ನಿರತನಾದೊಡೆ*
*ಗುರುದರ್ಶನವಾದರೂ ಮರೆಯಬೇಕು*
*ಲಿಂಗಪೂಜೆಯಾದರೂ ತ್ಯಜಿಸಬೇಕು*
*ಜಂಗಮ ಮುಂದಿದ್ದರೂ ಹಂಗು ಹರಿಯಬೇಕು*

ಈ ವಚನ ಶರಣರು ಕಾಯಕಕ್ಕೆ ನೀಡಿದ ಗೌರವ ಹಾಗೂ ಮಹತ್ವದ ಸ್ಥಾನವನ್ನು ತಿಳಿಸುತ್ತದೆ. ಆದುದರಿಂದಲೇ 'ಕಾಯಕವೇ ಕೈಲಾಸ' ಎಂಬ ನುಡಿ ಅಸ್ತಿತ್ವಕ್ಕೆ ಬಂದಿದೆ. ನುಲಿಯ ಚಂದಯ್ಯ, ಮಡಿವಾಳ ಮಾಚಿದೇವ, ಮೋಳಿಗೆ ಮಾರಯ್ಯ, ಚಮ್ಮಾರ ಹರಳಯ್ಯ, ದಂಡನಾಥ ಬಸವಾಧೀಶ, ಮದ್ದಲೆ ಪ್ರಭುದೇವ ಮೊದಲಾದ ಶರಣರು ತಮ್ಮನ್ನು ತೊಡಗಿಸಿಕೊಂಡರು. ಕಾಯಕದ ಮುಂದೆ ತಮ್ಮ ಹೆಸರನ್ನು ಹೇಳಿರುವುದು ಅವರು ಕಾಯಕವನ್ನು ಪ್ರೀತಿಸುತ್ತಿದ್ದ ಬಗೆಯನ್ನು ಸೂಚಿಸುತ್ತದೆ. ಅದು ಹೆಮ್ಮೆಯೂ ಹೌದು. ಒಟ್ಟಿನಲ್ಲಿ ಕಾಯಕ - ಅದು ಸತ್ಯಶುದ್ಧವಾದ ಕಾಯಕ.

ವಚನಕಾರರು ಕಾಯಕದ ಮತ್ತೊಂದು ಮುಂದುವರಿದ ರೂಪವನ್ನು ದಾಸೋಹದಲ್ಲಿ ಕಂಡರು. ಕಾಯಕ-ದಾಸೋಹ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದು ಸತ್ಯಶುದ್ಧ ಸಾತ್ವಿಕ ರೂಪವಾದರೆ, ಮತ್ತೊಂದು ಭಾವಪೂರ್ಣ ದಾಸೋಹ. ದಾರಿದ್ರ್ಯ ನಿರ್ಮೂಲನಕ್ಕೆ ಕಾಯಕವನ್ನು ಕೈಗೊಂಡರೆ, ತಾವು ಗಳಿಸಿದ ದುಡಿಮೆಯ ಸ್ವಲ್ಪಭಾಗವನ್ನು ಸಮಾಜಕ್ಕೆ ವಿನಿಯೋಗಿಸುವುದು ದಾಸೋಹ. ಇದರಲ್ಲಿ ಎಲ್ಲರೂ ಎಲ್ಲರಿಗಾಗಿ ಎಂಬ ವಿಶಾಲ ಮನೋಭಾವವಡಗಿದೆ.

ದುಡಿಯುವುದು ಒಂದು ಕ್ರಿಯೆಯಾದರೆ, ದುಡಿದದ್ದನ್ನು ಹಂಚಿ ತಿನ್ನುವುದು ಅದರ ಮುಂದಿನ ಹೆಜ್ಜೆ, ಸಂಪತ್ತಿನ ವಿಕೇಂದ್ರೀಕರಣ ಇಲ್ಲಿದೆ. ಅದರ ಸಾಮಾಜಿಕ ಸಂಗ್ರಹಣೆಯಿಂದ ಸಮಾಜದ ಸರ್ವಾಂಗೀಣ ವಿಕಾಸ ಸಾಧ್ಯ. ಇಂದಿನ ಸಮಾಜವಾದಿಗಳು-ಸಮತಾವಾದಿಗಳು ಏನನ್ನು ಹೇಳಬಯಸುತ್ತಿದ್ದಾರೋ ಅದನ್ನು ಬಹು ಹಿಂದೆಯೇ ವಚನಕಾರರು ಅನುಷ್ಠಾನಗೊಳಿಸಿದ್ದಾರೆ.

**ಇಂದಿಂಗೆ ನಾಳೆಗೆ ಎಂಬ ಸಂದೇಹ ಬಿಟ್ಟು**
**ಮುಂದಣ ಕಾಯಕ ಅಂದಂದಿಗೆ ಉಂಟು ಎಂಬುದನರಿತರೆ,**
**ಬಂದುದ ಕೂಡಿಕೊಂಡು, ಲಿಂಗಾರ್ಚನೆಯಮಾಡಿ ಸದಾನಂದದಲ್ಲಿಪ್ಪ**

ಎಂಬ ವಚನದ ಮಹತ್ವವನ್ನು ಕಾಯಕ ದಾಸೋಹ ನಿರೂಪಿಸುತ್ತದೆ.

ವಚನ ಚಳುವಳಿಯ ಷಟ್ಸ್ಥಲದ ಮೂರನೆಯ ಸ್ಥಲವಾದ ಪ್ರಸಾದಿ ಸ್ಥಲದಲ್ಲಿ ಸಂಪದ ಸಮ ವಿನಿಯೋಗದ ಕುರಿತ ವಿಚಾರವಿದೆ.

**ಪರರ ತನ್ನಂತೆ ಭಾವಿಸಿ,**
**ವಿಶ್ವಾಸದಿಂದ ದಾಸೋಹವ ಮಾಡಲು**
**ಇಹಸಿದ್ಧಿ, ಪರಸಿದ್ಧಿ, ಸರ್ವಸಿದ್ಧಿ**
**ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ**
**ಸೋಹಂ ಎಂಬುದು ಅಂತರಂಗದ ಮದ**
**ಶಿವೋಹಂ ಎಂಬುದು ಬಹಿರಂಗದ ಮದ**
**ಈ ದ್ವಂದ್ವವ ಅಳಿದು ದಾಸೋಹಂ ಎಂದೆನಿಸಯ್ಯಾ**

ಎಂಬ ವಚನಕಾರರ ನುಡಿ ದಾಸೋಹದ ಮಹತ್ತನ್ನು ಪ್ರತಿಬಿಂಬಿಸುತ್ತದೆ.

ನಡೆದಾಡುವ ಬಸವಣ್ಣನೆಂದೇ ಮನೆಮಾತಾಗಿರುವ ಪರಮಪೂಜ್ಯ ತ್ರಿವಿಧ ದಾಸೋಹಮೂರ್ತಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡು ಅನುಷ್ಠಾನಗೊಳಿಸುತ್ತಾ ಬಂದಿರುವ ಕಾಯಕ-ದಾಸೋಹ ಸಿದ್ಧಾಂತ ಶ್ರೀಮಠದಲ್ಲಿ ಸಾಕಾರಗೊಂಡಿದೆ. ಹೀಗೆ ಸತ್ಯಶುದ್ಧ ಸಾತ್ವಿಕ ಕಾಯಕ ಹಾಗೂ ಭಾವಪೂರ್ಣ ದಾಸೋಹ-ಇವೆರಡನ್ನೂ ವಚನ ಚಳುವಳಿ ನಾಡಿಗೆ ನೀಡಿ ಸಮಾನತೆಯ ನೆಲೆ-ಸಹೋದರತೆಯ ನೆಲೆಯನ್ನು ಸ್ಥಾಪಿಸಿದೆ. □







"........ಕನ್ನಡ ವಾತಾವರಣ ಸೃಷ್ಟಿಯಾಗಬೇಕಾದಲ್ಲಿ ಕನ್ನ ನಾಡಿನ ಪ್ರತಿಯೊಬ್ಬ ನಾಗರಿಕನ ಸಕ್ರಿಯ ಸಹಕಾರ ಬೇಕು. ಸಾರ್ವಜನಿಕರು ತಮ್ಮ ದಿನನಿತ್ಯದ ವ್ಯವಹಾರಗಳಲ್ಲಿ ಕನ್ನಡವನ್ನು ವ್ಯಾಪಕವಾಗಿ ಬಳಕೆ ಮಾಡಬೇಕು. ಸರ್ಕಾರಕ್ಕೆ ಸಲ್ಲಿಸುವ ಅರ್ಜಿ ಮುಂತಾದವುಗಳನ್ನು ಕನ್ನಡದಲ್ಲಿಯೇ ಸಲ್ಲಿಸಬೇಕು. ತಮ್ಮ ವ್ಯಾಪಾರ ವಹಿವಾಟುಗಳಲ್ಲಿ ಕನ್ನಡದ ಬಳಕೆಯನ್ನು ವ್ಯಾಪಕವಾಗಿ ಮಾಡಬೇಕು. ಸರ್ಕಾರವು ಕನ್ನಡದಲ್ಲಿಯೇ ಉತ್ತರಗಳನ್ನು ನೀಡಬೇಕೆಂದು ಒತ್ತಾಯಿಸಬೇಕು. ಕನ್ನಡದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸಿ ನಾಡು ನುಡಿಯ ಬಗ್ಗೆ ಹೆಮ್ಮೆಯ ಮನೋಭಾವವನ್ನು ತಾಳಬೇಕು. ಅದಷ್ಟು ಕನ್ನಡದಲ್ಲಿ ಜಾಹಿರಾತುಗಳನ್ನು ನೀಡಬೇಕು. ಕರ್ನಾಟಕದಲ್ಲಿ ಪ್ರದರ್ಶಿಸುವ ಜಾಹಿರಾತು ಫಲಕಗಳಲ್ಲಿ ಕಡೇಪಕ್ಷ ಮೊದಲ ಎರಡು ಸಾಲುಗಳಾದರೂ ಕನ್ನಡದಲ್ಲಿ ಇರಬೇಕು. ಕರ್ನಾಟಕದ ಅಂಗಡಿಗಳು ಮತ್ತಿತರ ವ್ಯಾಪಾರ ಸಂಸ್ಥೆಗಳ ಎಲ್ಲಾ ನಾಮಫಲಕಗಳಲ್ಲಿ ಕನ್ನಡದ ಬಳಕೆಯಾಗಬೇಕು. ಆಮಂತ್ರಣ ಪತ್ರಿಕೆ, ಸಭೆ-ಸಮಾರಂಭಗಳ ನಡವಳಿಕೆಗಳು ಅವುಗಳೆಲ್ಲಾ ಕನ್ನಡದಲ್ಲಿಯೇ ಇರಬೇಕು. ಖಾಸಗಿ ತಯಾರಕರು ತಾವು ತಯಾರಿಸುವ ವಸ್ತುಗಳ ಮೇಲೆ ಕನ್ನಡದ ಅಕ್ಷರಗಳಲ್ಲಿ ತಮ್ಮ ಹೆಸರು ಇತ್ಯಾದಿಗಳನ್ನು ನಮೂದಿಸಬೇಕು. ಕನ್ನಡ ಪರವಾದ ಒಂದು ದೃಢವಾದ ಸಂಸ್ಕೃತಿ ಮೂಡದ ಹೊರತು ಕನ್ನಡದ ವಾತಾವರಣ ನಿರ್ಮಾಣವಾಗದ ಹೊರತು ನಾವು ಯಶಸ್ಸು ಕಾಣುವುದು ಕಷ್ಟ.

ಕನ್ನಡಿಗರು ಮತ್ತು ಕನ್ನಡ ಸಂಘ-ಸಂಸ್ಥೆಗಳು ತಮ್ಮ ಬಡಾವಣೆಯಲ್ಲಿರುವ ಕನ್ನಡೇತರ ಸಂಘಗಳ ಸದಸ್ಯರನ್ನು ಭೇಟಿಮಾಡಿ, ಅವರಿಗೆ ಕನ್ನಡ ಕಲಿಸುವ ಏರ್ಪಾಡು ಮಾಡಲು ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕರಿಗೆ ಪತ್ರ ಬರೆದು ಅವರಿಂದ ಸೌಲಭ್ಯ ಒದಗಿಸಬೇಕು. ಕನ್ನಡೇತರರು ಕನ್ನಡ ಕಲಿತು ಇಲ್ಲಿಯ ಜನರೊಡನೆ ಪರಸ್ಪರ ಸೌಹಾರ್ದದಿಂದ ಬಾಳಲು ಅನುಕೂಲವಾಗುವಂತೆ ಕನ್ನಡ ವಾತಾವರಣ ನಿರ್ಮಾಣ ಮಾಡಬೇಕು. ಪ್ರಾಧಿಕಾರದಿಂದ ಮಾಹಿತಿ ತರಿಸಿಕೊಂಡು ಆಡಳಿತ ಕನ್ನಡ ಮತ್ತು ಡಾ. ಸರೋಜಿನಿ ಮಹಿಷಿ ಸಮಿತಿ ವರದಿ ಬಗ್ಗೆ ಜನರಲ್ಲಿ ಸರಿಯಾದ ತಿಳುವಳಿಕೆ ಮೂಡಿಸಬೇಕು. ಈ ವರ್ಷ ರಾಜ್ಯೋತ್ಸವದ ಕಾರ್ಯಕ್ರಮದಲ್ಲಿ ಜನರಲ್ಲಿ ಕನ್ನಡ ಜಾಗೃತಿ ಉಂಟಾಗುವಂಥ ಕಾರ್ಯಕ್ರಮಗಳನ್ನು ರೂಪಿಸುವಂತೆ ಸಾರ್ವಜನಿಕರಲ್ಲಿ ಮನವಿ ಮಾಡಿಕೊಳ್ಳಬೇಕು."

- ಜಿ. ನಾರಾಯಣ
ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು
ಮತ್ತು ಕನ್ನಡ ಅಭಿವೃದ್ಧಿ ಪ್ರಾಧಿಕಾರ

"..........ಯಾವುದೇ ಪ್ರದೇಶದಲ್ಲಿ ಆ ಪ್ರದೇಶದ ಜನರಿಗೆ ಉದ್ಯೋಗದಲ್ಲಿ ಆದ್ಯತೆ ದೊರೆಯಬೇಕಾದದ್ದು ಅತ್ಯಂತ ಮುಖ್ಯವಾದದ್ದು. ರಾಜ್ಯ ಸರ್ಕಾರವು ಈ ನೀತಿಯನ್ನು ಕಟ್ಟು ನಿಟ್ಟಾಗಿ ಅನುಸರಿಸಬೇಕು. ಅಷ್ಟೇ ಅಲ್ಲ, ಖಾಸಗಿ ಉದ್ಯಮಿಗಳಿಗೂ ಈ ಬಗ್ಗೆ ಸ್ಪಷ್ಟವಾದ ನಿರ್ದೇಶನ ಕೊಡುವುದು ಅಗತ್ಯ. ಈ ಸಂಬಂಧ ಸರೋಜಿನಿ ಮಹಿಷಿ ವರದಿಯ ಶಿಫಾರಸುಗಳಿಗೆ ಅನುಗುಣವಾಗಿ ಪ್ರಗತಿ ಪರಿಶೀಲನೆ ಮಾಡಲು ಒಂದು ಉನ್ನತ ಸಮಿತಿ ಅಗತ್ಯವಿದೆ. ಈ ಸಮಿತಿ ನಿಯತಕಾಲಿಕವಾಗಿ ಸೇರಿ ಸಾರ್ವಜನಿಕ ಹಾಗೂ ಖಾಸಗಿ ಉದ್ಯಮಗಳಲ್ಲಿನ ಉದ್ಯೋಗ ಸ್ಥಿತಿ ಮತ್ತು ಅವಕಾಶವಾಗುವಂತೆ ಪರಿಶೀಲನೆ ನಡೆಸಿ ಸ್ಥಳೀಯರಿಗೆ ಉದ್ಯೋಗ ದೊರಕದಿರುವ ಸಂದರ್ಭಗಳು ಕಂಡುಬಂದಲ್ಲಿ ಅಂತಹ ಉದ್ಯಮಿಗಳಿಗೆ ಸ್ಪಷ್ಟ ನಿರ್ದೇಶನ ನೀಡುವ ವ್ಯವಸ್ಥೆಯಾಗಬೇಕು."

- ಗೊ.ರು. ಚನ್ನಬಸಪ್ಪ
ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು

ನಿಮಗಿದು ತಿಳಿದಿರಲಿ

# ಉದ್ದು



ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

ಉದ್ದು ಸಾಮಾನ್ಯವಾಗಿ ಬೇಗ ಜೀರ್ಣಿಸತಕ್ಕುದಲ್ಲ. ಇದನ್ನು ಜೀರ್ಣಿಸಿಕೊಳ್ಳಬೇಕಾದರೆ ಜಠರಾಗ್ನಿಯು ಬಹಳ ತೀಕ್ಷ್ಣವಾಗಿರಬೇಕು. ಮತ್ತು ಇದನ್ನು ಸೇವಿಸತಕ್ಕವರು ಶಾರೀರಿಕ ವ್ಯಾಮವನ್ನು ಹೆಚ್ಚಾಗಿಯೇ ಮಾಡಬೇಕು. ಉದ್ದು ಸಿಹಿ ಮತ್ತು ಉಷ್ಣ ಗುಣವುಳ್ಳುದು, ಬಲಕಾರಿ, ವಾತನಾಶಕ, ಕಫ ಮತ್ತು ವೀರ್ಯವನ್ನು ವೃದ್ಧಿಗೊಳಿಸುವುದು, ಮಲಮೂತ್ರಗಳನ್ನು ಸಡಲಿಸುವುದಲ್ಲದೆ ತಾಯಿಯ ಎದೆಹಾಲನ್ನು ಹೆಚ್ಚಿಸುವುದು.

ಉದ್ದಿನಬೇಳೆಯನ್ನು ಹುರಿದು ಹಾಲಿನಲ್ಲಿ ಹಾಕಿ ಸಕ್ಕರೆ ಏಲಕ್ಕಿ ಮತ್ತು ದ್ರಾಕ್ಷಿಯನ್ನು ಹಾಕಿ ಖೀರನ್ನು ಮಾಡಿ ಸೇವಿಸುವುದ ರಿಂದ ಬಲ ವೀರ್ಯಗಳು ವೃದ್ಧಿಯಾಗುತ್ತವೆ.

ಉದ್ದಿನ ಬೇಳೆಯನ್ನು ಹುರಿದು ಬೀಸಿ, ತುಪ್ಪ, ಸಕ್ಕರೆ, ಏಲಕ್ಕಿ ದ್ರಾಕ್ಷಿ, ಬಾದಾಮಿ, ಕೇಸರಿ ಮುಂತಾದ ಪದಾರ್ಥಗಳನ್ನು ಹಾಕಿ ಲಡ್ಡುಗಳನ್ನು ಮಾಡಿಕೊಂಡು ನಿತ್ಯದಲ್ಲಿ ಅವರವರ ಅಗ್ನಿಬಲಕ್ಕೆ ಅನುಸಾರವಾಗಿ ಸೇವಿಸಿ ಹಾಲನ್ನು ಕುಡಿಯಬೇಕು. ಇದು ಅತ್ಯಂತ ವೀರ್ಯವರ್ಧಕವಾಗಿರುತ್ತದೆ.

ಉದ್ದಿನಲ್ಲಿ ವಾತರೋಗವನ್ನು ನಿಗ್ರಹಿಸತಕ್ಕ ಶಕ್ತಿಯು ವಿಶೇಷವಾಗಿದೆ. ಒಂದು ಸೇರು ಉದ್ದನ್ನು ೧೦ ಸೇರು ನೀರಿನಲ್ಲಿ ಹಾಕಿ ಕುದಿಸಿ ೨ ಸೇರು ಕಷಾಯವನ್ನಿಳಿಸಿಕೊಳ್ಳಬೇಕು. ಈ ಕಷಾಯಕ್ಕೆ ಅಳತೆ ೧ ಸೇರು ಎಳ್ಳೆಣ್ಣೆಯನ್ನು ಮತ್ತು ೨ ಸೇರು ಹಸುವಿನ ಹಾಲನ್ನೂ ಹಾಕಿ ಕಾಯಿಸಬೇಕು. ಕಾಯುವಾಗ ೩ ತೊಲ ಅಜವಾನ, ೩ ತೊಲ ಸೌಂಪು, ೩ ತೊಲ ಅಶ್ವಗಂಧ, ೩ ತೊಲ ವಾಯಿವಿಳಂಗ, ೩ ತೊಲ ಬೆಳ್ಳುಳ್ಳಿ, ೩ ತೊಲ ಸಣ್ಣ ರಾಶ್ಮೆ ೧ ತೊಲ ಕರ್ಪೂರ, ಅರ್ಧ ತೊಲ ಅಫೀಮು, ಅರ್ಧ ತೊಲ ಹಿಂಗು, ಈ ಸಾಮಾನುಗಳನ್ನು ತಂದು ಮೊದಲೇ ಕುಟ್ಟಿಟ್ಟುಕೊಂಡಿದ್ದು ಹಾಕಬೇಕು. ಕರ್ಪೂರವನ್ನು ಪುಡಿಮಾಡಿ ಎಣ್ಣೆಯನ್ನು ಇಳಿಸುವಾಗ ಹಾಕಬೇಕು. ಅಫೀಮನ್ನು ಕಲಬತ್ತಿನಲ್ಲಿ ಹಾಕಿ ಅರೆದು ಸ್ವಲ್ಪ ಎಣ್ಣೆಯಲ್ಲಿ ಚೆನ್ನಾಗಿ ಕಲೆಸಿ, ಇದನ್ನು ಒಳೆಯ ಮೇಲಿರುವ ಎಣ್ಣೆಯನ್ನು ಕೆಳಗಿಳಿಸಿ ಶೋಧಿಸಿಕೊಂಡಮೇಲೆ ಹಾಕಬೇಕು. ಈ ಎಣ್ಣೆಯು ಕೀಲುನೋವು, ಸರ್ವಾಂಗಗಳ ನೋವು, ಲಕ್ವಾ ಮುಂತಾದ ಸಕಲವಿಧ ವಾತರೋಗಗಳಿಗೂ ದಿವ್ಯೌಷಧವಾಗಿದೆ. ನೋವಿರುವ ಭಾಗಗಳಿಗೆ ರಾತ್ರಿಯಲ್ಲಿ ಹಚ್ಚಿ ಚೆನ್ನಾಗಿ ತಿಕ್ಕಿಸಿ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಬೇಕು. ಪರೀಕ್ಷಿಸಲ್ಪಟ್ಟಿದೆ.

ಉದ್ದಿನಬೇಳೆಯ ಚೂರ್ಣ, ಹುರಿದ ಗೋಧಿಯ ಚೂರ್ಣ, ಹುರಿದ ಜವೆಯ ಚೂರ್ಣ, ನಸುಗುನ್ನಿ ಬೀಜದ ಚೂರ್ಣ, ಪ್ರತಿಯೊಂದು ೧೦-೧೦ ತೊಲ, ಹಿಪ್ಪಲಿಯ ಚೂರ್ಣ ೩ ತೊಲ, ಇವುಗಳನ್ನು ೨೪ ತೊಲ ತುಪ್ಪದಲ್ಲಿ ಸುಪಕ್ವವಾಗಿ ಸುವಾಸನೆಯು ಬರುವವರೆಗೆ ಹುರಿಯಬೇಕು. ಅನಂತರ ೮೦ ತೊಲ ಕಲ್ಲುಸಕ್ಕರೆಯ ಗಟ್ಟಿ ಪಾಕವನ್ನು ಮಾಡಿ ಆ ಪಾಕದಲ್ಲಿ ಮೇಲಿನ ಚೂರ್ಣವನ್ನು ಹಾಕಿ ಚೆನ್ನಾಗಿ ಕುಡಿಸಬೇಕು. ಇಳಿಸುವಾಗ ಬಾದಾಮಿಬೀಜ, ಪಿಸ್ತಾ, ದ್ರಾಕ್ಷಿ ಇವುಗಳನ್ನು ೧೦-೧೦ ತೊಲ ಹಾಕಿದ ನಂತರ ೩-೩ ತೊಲದ ಲಡ್ಡುಗಳನ್ನು ಕಟ್ಟಿ ಇಟ್ಟುಕೊಳ್ಳಬೇಕು. ಬಾದಾಮಿ, ಪಿಸ್ತಾಗಳನ್ನು ಅರೆದು ಹಾಕುವುದು ಉತ್ತಮ. ಪ್ರಾತಃಕಾಲ ಸಾಯಂಕಾಲಗಳಲ್ಲಿ ಒಂದೊಂದು ಲಡ್ಡುವನ್ನು ತಿಂದು ಮೇಲೆ ಹಾಲನ್ನು ಕುಡಿದರೆ ಬಲ, ವೀರ್ಯಗಳು ವೃದ್ಧಿಯಾಗಿ ಸಕಲ ಧಾತುಗಳೂ ಅತ್ಯಂತ ಬಲಶಾಲಿಗಳಾಗುತ್ತವೆ. ಈ ಲೇಹ್ಯವು ಗೃಹಸ್ಥರಿಗೆ ನಿಜವಾದ ಆಮೋದವನ್ನು ಉಂಟುಮಾಡುತ್ತದೆ. ಚಳಿಗಾಲದಲ್ಲಿ ೪ ತಿಂಗಳುಗಳವರೆಗೆ ಇದನ್ನು ಸೇವಿಸತಕ್ಕವರಿಗೆ ಅಪಾರವಾದ ಬಲದ ಭಂಡಾರವೇ ದೊರೆಯುವುದರಲ್ಲಿ ಯಾವ ಸಂದೇಹವೂ ಇಲ್ಲ. ಅನೇಕ ಸಲ ಪರೀಕ್ಷಿಸಲ್ಪಟ್ಟಿದೆ.

ಒಂದು ತೊಲ ಹಸಿರು ಉದ್ದಿನ ಹಿಟ್ಟನ್ನು ಒಂದು ತೊಲ ತುಪ್ಪ, ಮುಕ್ಕಾಲು ತೊಲ ಜೇನುತುಪ್ಪಗಳೊಡನೆ ಕೂಡಿಸಿ ೪ ತಿಂಗಳುಗಳವರೆಗೆ ತಮ್ಮ ಅಗ್ನಿಬಲವನ್ನು ನೋಡಿಕೊಂಡು ಸೇವಿಸತಕ್ಕವರಿಗೆ ಸಂಸಾರದಲ್ಲಿ ನಿರತಿಶಯವಾದ ಸುಖವು ದೊರೆಯುತ್ತದೆ. ಮಂದಾಗ್ನಿಯುಳ್ಳವರು ಹಿಟ್ಟನ್ನು ಸ್ವಲ್ಪ ತುಪ್ಪದಲ್ಲಿ ಹುರಿದು ಉಪಯೋಗಿಸಬಹುದು.

ಉದ್ದಿನ ಬೇಳೆಯೊಡನೆ ನಸುಗುನ್ನಿಯ ಬೀಜಗಳನ್ನು ಕೂಡಿಸಿ ಬೇಯಿಸಿ ತೊವೆಗೆ ಮಾಡತಕ್ಕ ಸಂಸ್ಕಾರಗಳನ್ನು ಸಂಕ್ಷಿಪ್ತವಾಗಿ ಮಾಡಿ ರೊಟ್ಟಿಯೊಡನೆ ನಿತ್ಯದಲ್ಲಿ ಸೇವಿಸುತ್ತಿರುವವರಿಗೆ ಬಲ, ವೀರ್ಯಗಳು ವೃದ್ಧಿಯಾಗುತ್ತವೆ. ಸಪ್ಪೆ ತೊವೆಗೇ ಹಾಲು ಸಕ್ಕರೆಗಳನ್ನು ಕೂಡಿಸಿಯೂ ಕುಡಿಯಬಹುದು. ಆದರೆ ಇದನ್ನು ಸೇವಿಸತಕ್ಕವರು ತಮ್ಮ ಅಗ್ನಿಬಲವನ್ನು ಮೊದಲು ನೋಡಿಕೊಳ್ಳಬೇಕು. ಇದು ಸುಶ್ರುತಸಂಹಿತೆಯ ವಾಜೀಕರಣಾಧಿಕಾರದಲ್ಲಿ----

''ಸ್ವಯಂಗುಪ್ತಾಫಲೈರ್ಯುಕ್ತಂ ಮಾಷಸೂಪಂ ಹಿಬೇನ್ನರಃ''

ಎಂದು ಬಹಳ ಪ್ರಶಂಸಿಲ್ಪಟ್ಟಿದೆ.

ಉದ್ದಿನ ಹಿಟ್ಟು, ಅತಿಮಧುರ, ಕುಂಬಳದ ಬೇರು, ಅಶ್ವಗಂಧ, ಇವುಗಳನ್ನು ಸಮವಾಗಿ ಕುಟ್ಟಿ ಶೋಧಿಸಿಕೊಂಡು ನಿತ್ಯದಲ್ಲಿ ಒಂದೊಂದು ತೊಲದಂತೆ ಜೇನುತುಪ್ಪದೊಡನೆ ಸೇವಿಸುವುದರಿಂದ ಸ್ತ್ರೀಯರ ಸೋಮ (ಬಿಳಪು) ರೋಗವು ಶಾಂತವಾಗುತ್ತದೆ.





## ಚಿಕ್ಕತೊಟ್ಲುಕೆರೆಯಲ್ಲಿ

# ಲಿಂಗೈಕ್ಯ ಪೂಜ್ಯ ಶ್ರೀ ಅಟವೀ ಶಿವಯೋಗಿಗಳ ಶತಮಾನೋತ್ಸವ



ದಿನಾಂಕ ೪.೧೧.೨೦೦೦, ತುಮಕೂರು ತಾಲ್ಲೂಕಿನ ಚಿಕ್ಕತೊಟ್ಲುಕೆರೆಯಲ್ಲಿ ಒಂದು ಅವಿಸ್ಮರಣೀಯ ದಿನ. ಶಿವಯೋಗಿ ಪೂಜ್ಯ ಶ್ರೀ ಅಟವೀಮಹಾಸ್ವಾಮಿಗಳವರು ಲಿಂಗೈಕ್ಯರಾಗಿ ನೂರುವರ್ಷಗಳು ತುಂಬಿದ ಸಂದರ್ಭ. ಸ್ಮರಣೆ ಸುಸಂಸ್ಕೃತ ಪವಿತ್ರ ಪರಿಸರ ನಿರ್ಮಾಣವಾದ ಸನ್ನಿವೇಶ. ಪ್ರಕೃತಿಯ ಸುಂದರ ದೃಶ್ಯ. ಜನಸಾಗರ ಕಂಡ ಕಣ್ಣುಗಳು ಪುಣ್ಯ. ಪುಟ್ಟ ಗ್ರಾಮದಲ್ಲಿ ಬೃಹತ್ ಸಮಾರಂಭ. ಭಕ್ತಿಯೇ ಮೈವೆತ್ತು ಎದ್ದು ಬಂದಂತಾಯಿತು. ''ಕಂಡೀರೇನವ್ವಾ ಅಡವೀ ಸ್ವಾಮೀಯಾ'' - ಹಾಡಿನ ಪ್ರತಿಧ್ವನಿ. ವೇದಿಕೆಯ ಎತ್ತರ ಶಿವಯೋಗಿಗಳ ಮನದ ಎತ್ತರಕ್ಕೆ ಸಾಕ್ಷಿಯಾಯಿತು. ಅದೂ ಎಷ್ಟುದ್ದ, ಎಷ್ಟಗಲ! ಅಲಂಕೃತ ವೇದಿಕೆಯ ಮೇಲೆ ಪೂಜ್ಯರಾದ ಸಿದ್ಧಗಂಗಾ ಶ್ರೀಗಳು, ಚುಂಚನಗಿರಿ ಶ್ರೀಗಳು, ಮುಂಡರಗಿ ಶ್ರೀಗಳು, ಅಟವೀ ಸುಕ್ಷೇತ್ರದ ಶ್ರೀಗಳು, ತುಮಕೂರು ಚಿಕ್ಕಪೇಟೆಯ ಹಿರೇಮಠದ ಶ್ರೀಗಳು, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರು. ಕೃಷಿ ಸಚಿವ ಶ್ರೀ ಟಿ.ಬಿ. ಜಯಚಂದ್ರ, ಉನ್ನತ ಶಿಕ್ಷಣ ರಾಜ್ಯ ಸಚಿವ ಡಾ|| ಪರಮೇಶ್ವರ್, ಸಂಸದರಾದ ಶ್ರೀ ಜಿ.ಎಸ್. ಬಸವರಾಜು, ಶಾಸಕರಾದ ಶ್ರೀ ಆರ್. ನಾರಾಯಣ್, ಶ್ರೀ ಎಸ್. ಶಿವಣ್ಣ, ಶ್ರೀ ವೀರಣ್ಣಗೌಡ, ಶ್ರೀ ವೆಂಕಟರಮಣಪ್ಪ, ಶ್ರೀ ಕೆ.ಎನ್. ರಾಜಣ್ಣ, ಗಣ್ಯಮಾನ್ಯರು ಉಪಸ್ಥಿತರಾಗಿ ಉತ್ಸವದ ಯಶಸ್ಸಿಗೆ ಕಾರಣರಾದರು.

''ಜಾತಿಮತಗಳನ್ನು ಮೀರಿ ದೀನ-ದಲಿತರ ಏಳ್ಗೆಗೆ ಶ್ರಮಿಸಿದ ಪೂಜ್ಯಶ್ರೀ ಅಟವೀಸ್ವಾಮಿಗಳು ಯುಗಪುರುಷರು. ಅವರ ಶಿಷ್ಯರಾದ ಪೂಜ್ಯಶ್ರೀ ಉದ್ದಾನ ಸ್ವಾಮಿಗಳೂ ಸಹ ಕಾಯಕ-ದಾಸೋಹ ಮಣಿಹಕ್ಕೆ ಅರ್ಪಿಸಿಕೊಂಡ ಪುಣ್ಯಚೇತನರು. ನಮ್ಮ ಸುದೈವ ಈ ಮಹಾತ್ಮರನ್ನು ಪಡೆದದ್ದು. ಆಧ್ಯಾತ್ಮದರ್ಶನ ಮಾಡಿಸಿದ ಶಿವಯೋಗಿಗಳು ಕನ್ನಡನಾಡಿನ ಮಹಾಯುಗಪುರುಷರು. ಮಠಮಾನ್ಯಗಳ ಸೇವೆ ಕರ್ನಾಟಕಕ್ಕೆ ಲಭ್ಯವಾದದ್ದು ಸರ್ಕಾರದ ಭಾಗ್ಯ. ಇಂಥ ಕ್ಷೇತ್ರಗಳು ಬ್ಯಾಟರಿಗಳಿದ್ದಂತೆ. ಶಕ್ತಿಹೀನವಾದ ನಮ್ಮ ಬದುಕಿನಲ್ಲಿ ''ರಿಚಾರ್ಜ್'' ಮಾಡಿಕೊಳ್ಳಲು ಸಾಧ್ಯ. ನಮ್ಮ ದೇಹವೂ ಒಂದು ಯಂತ್ರ. ಅದಕ್ಕೇ ಅಗತ್ಯವಾದ ಇಂಧನ ತುಂಬುವುದು ಅಗತ್ಯ. ನಮ್ಮ ಧಾರ್ಮಿಕ ಚಿಂತನೆಗಳಿಗೆ ಶಿವಯೋಗಿಗಳ ಆಶೀರ್ವಾದ ಬೇಕು. ಒಂದು ಮಾತು ಸ್ಪಷ್ಟ. ಆಧ್ಯಾತ್ಮವೊಂದೇ ನಮ್ಮ ಹೊಟ್ಟೆ ತುಂಬಿಸಲಾರದು. ಲೌಕಿಕ ಜೀವನವೂ ಮುಖ್ಯ. ಮೂಲಭೂತ ಆವಶ್ಯಕತೆಗಳಾದ ಅನ್ನ, ಬಟ್ಟೆ, ವಸತಿಗಳತ್ತ ಗಮನ ಕೊಡಬೇಕು. ಹಸಿದ ಹೊಟ್ಟೆ ಪುರಾಣ ಕೇಳಲಿಚ್ಛಿಸದು. ಈ ಪ್ರದೇಶದ ರೈತ ಜನತೆಗೆ ನೇತ್ರಾವತಿ ವರಪ್ರಸಾದವಾಗಬೇಕೆಂಬ ಹಂಬಲ ಕೇಳಿಬರುತ್ತಿದೆ. ಅದು ಸಾಧ್ಯವಾಗಿದೆ. ಅದರತ್ತ ಕಾರ್ಯಪ್ರವೃತ್ತರಾಗುವ ಇಚ್ಛೆ ಸರ್ಕಾರಕ್ಕಿದೆ. ಈಗಾಗಲೇ ನಿವೃತ್ತ ಇಂಜಿನಿಯರ್ ಶ್ರೀ ಜಿ.ಎಸ್, ಪರಮಶಿವಯ್ಯ ನವರ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಲಾಗಿದೆ. ವಿಶ್ವವೇ ಇಂದು ಮಾರುಕಟ್ಟೆಯಾಗಿದೆ. ಮಾಹಿತಿ ತಂತ್ರಜ್ಞಾನ, ಕಂಪ್ಯೂಟರ್ ಶಿಕ್ಷಣ ಸೇವೆಯಿಂದ ಕರ್ನಾಟಕವನ್ನು ನವನಿರ್ಮಾಣ ಮಾಡುವ ಹಂಬಲ ಸರ್ಕಾರದ್ದಾಗಿದೆ. ಪರಮಪೂಜ್ಯ ಶ್ರೀ ಸಿದ್ಧಗಂಗಾ ಶ್ರೀಗಳವರ ಸೇವೆ ಅನನ್ಯವಾದದ್ದು, ಆದರ್ಶಪೂರ್ಣವಾದದ್ದು,'' ಎಂಬುದಾಗಿ ಮುಖ್ಯಮಂತ್ರಿಗಳು ಜ್ಯೋತಿ ಬೆಳಗಿಸಿ ಮಾತನಾಡಿದರು.

ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತ ''ಆಧ್ಯಾತ್ಮಿಕತೆ ಭರತ ಖಂಡದ ಜೀವಾಳ. ಅವರ ಪರಿಪೂರ್ಣತೆ ಲೋಕಸಂಗ್ರಹ ಚರ್ಯೆಯಿಂದ, ಲೌಕಿಕ ಜೀವನದ ಸಮೃದ್ಧಿಗೆ ಆಧ್ಯಾತ್ಮ ಸುವರ್ಣ ಕಲಶ. ಜನಜಾಗೃತಿಗೆ, ಕ್ರಿಯಾಶೀಲ ಜೀವನಕ್ಕೆ, ದಾಸೋಹ ಸಂಸ್ಕೃತಿಗೆ ಶ್ರಮಿಸಿದವರು ಲಿಂಗೈಕ್ಯ ಶ್ರೀ ಅಟವೀ ಸ್ವಾಮಿಗಳು. ಪೂಜ್ಯರ ಸೇವಾಶಕ್ತಿಯಿಂದ ಶ್ರೀಕ್ಷೇತ್ರ ಸಿದ್ಧಗಂಗಾ ಪುನೀತವಾಗಿದೆ. ಶ್ರೀಕ್ಷೇತ್ರ ಪಾವನವಾಗಿದೆ. ಗುಬ್ಬಿ ಕ್ಷೇತ್ರ ಪುಣ್ಯದ ಕಣ್ಣಾಗಿದೆ. ಮಹಾತ್ಮರ ಸ್ಮರಣೆಯಿಂದ ಜೀವನ ದೊಡ್ಡದಾಗುತ್ತದೆ. ಮುಖ್ಯಮಂತ್ರಿಗಳು ಹೇಳಿದ ಹಾಗೆ ಆಧ್ಯಾತ್ಮಿಕ ಜೀವನ ಸುಂದರವಾಗಬೇಕಾದರೆ ಲೌಕಿಕ ಜೀವನ ನೆಮ್ಮದಿಯಿಂದಿರಬೇಕು. ಅದಕ್ಕಾಗಿ ಎಲ್ಲರೂ ಶ್ರಮಿಸಬೇಕು. ಪ್ರಜಾಪ್ರಭುತ್ವವೆಂದರೆ ಎಲ್ಲರ ಶ್ರಮದ ಮೂಲಕ ಎಲ್ಲರ ಪ್ರಗತಿ ಎಂದು ತಿಳಿಯಬೇಕು. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಪ್ರಭುಗಳು. ಪ್ರತಿನಿಧಿಗಳು ಕಾರ್ಯಶೀಲರು. ಮುಖಂಡರು ಪ್ರತಿಭಾಸಂಪನ್ನರಾಗಬೇಕು. ಶುದ್ಧ ಚಾರಿತ್ರ್ಯಧನರಾಗಬೇಕು. ಪೂಜ್ಯ ಶ್ರೀ ಅಟವೀಸ್ವಾಮಿಗಳು ಇಲ್ಲಿ ತಮ್ಮ ಲಿಂಗ ಪೂಜಾಶಕ್ತಿಯನ್ನು ಇಟ್ಟು ಹೋಗಿದ್ದಾರೆ. ಈ ಕ್ಷೇತ್ರವನ್ನು ಪವಿತ್ರಗೊಳಿಸಿದ್ದಾರೆ. ಅವರು ತೋರಿಸಿದ ಮಾರ್ಗದಲ್ಲಿ ನಾವು ಮುಂದುವರಿಯಬೇಕಾಗಿದೆ'' ಎಂದು ನುಡಿದರು.

''ಭಗವದ್ದರ್ಶನಕ್ಕಾಗಿ ರೂಪಿತವಾದದ್ದು ಶ್ರೀ ಅಟವೀ ಮಹಾಸುಕ್ಷೇತ್ರ. ಅನೇಕ ತಪಸ್ವಿಗಳ ಗದ್ದುಗೆಗಳಿಂದ ಶ್ರೀಕ್ಷೇತ್ರ ಪ್ರಜ್ವಲವಾಗಿರುವುದು ನಾಡಿನ ಜನತೆಯ ಮಹಾಭಾಗ್ಯ. ಶಿವಯೋಗಿಗಳು ಲೋಕಕಲ್ಯಾಣಕಾರಕರು. ಶ್ರೀ ಅಟವೀ ಸ್ವಾಮಿಗಳು ಶ್ರೀಕ್ಷೇತ್ರ ಸಿದ್ಧಗಂಗಾವನ್ನು ಸಂಸ್ಕೃತ ಜ್ಞಾನವನ್ನು ಎಲ್ಲರಿಗೆ ಒದಗಿಸಲು ಕಾರಣರಾದರು. ಅವರ ಪ್ರೀತಿಯ ಶಿಷ್ಯರಾದ ಶ್ರೀ ಉದ್ದಾನಸ್ವಾಮಿಗಳು ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಿದರು. ಪೂಜ್ಯರಾದ ಡಾ|| ಶ್ರೀ ಶಿವಕುಮಾರಸ್ವಾಮಿಗಳು ಮಹಾವಿದ್ಯಾಲಯವನ್ನಾಗಿ ಮಾಡಿದ ಕಾರಣಪುರುಷರು. ಶ್ರೀ ಅಟವೀಶ್ವರರ ಈ ಕ್ಷೇತ್ರ 'ಕಾಂಕ್ರೀಟ್ ಕಾಡಾಗದಂತೆ' ಬೆಳೆಯಲು ಕಾರ್ಯಕರ್ತರು, ಭಕ್ತಾದಿಗಳು ಎಚ್ಚರವಹಿಸಬೇಕು'' ಎಂದು ಆದಿಚುಂಚನಗಿರಿ ಮಠದ ಪೂಜ್ಯ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು ಆಶೀರ್ವಚನ ನೀಡಿದರು.

ಈ ಸಂದರ್ಭದಲ್ಲಿ ಸಂಸದರಾದ ಶ್ರೀ ಜಿ.ಎಸ್. ಬಸವರಾಜು ಅವರು ಮಾತನಾಡಿದರು. ಸಚಿವರಾದ ಶ್ರೀ ಟಿ.ಬಿ. ಜಯಚಂದ್ರ ಸ್ಮರಣ ಸಂಚಿಕೆ ಬಿಡುಗಡೆ ಮಾಡಿದರು. ಉತ್ಸವ ಸಮಿತಿಯ ಅಧ್ಯಕ್ಷರಾದ ಶಾಸಕ ಶ್ರೀ ಆರ್. ನಾರಾಯಣ್ ಅವರು ಪ್ರಾಸ್ತಾವಿಕ ನುಡಿಗಳೊಂದಿಗೆ ಸ್ವಾಗತ ಮಾಡಿದರು. ಶ್ರೀ ತೊ.ಗ. ಅಡವೀಶಪ್ಪ ವಂದನೆ ಸಲ್ಲಿಸಿದರು. ಕಾರ್ಯಕ್ರಮವನ್ನು ಸಮಯಪ್ರಜ್ಞೆಯೊಂದಿಗೆ ಅಚ್ಚುಕಟ್ಟಾಗಿ ನಿರೂಪಿಸಿ ಎಲ್ಲರ ಸಂತೋಷಕ್ಕೆ ಶ್ರೀ ಜಿ.ಎಸ್. ಸೋಮಶೇಖರ್ ಕಾರಣರೆನಿಸಿದರು.

ಸ್ಮರಣೋತ್ಸವದ ಅಂಗವಾಗಿ ೪.೧೧.೨೦೦೦ದಂದು ಎರಡನೇ ಅಧಿವೇಶನವಾಗಿ ಶಿವಾನುಭವಗೋಷ್ಠಿ, ೫.೧೨.೨೦೦೦ ದಂದು ಮಹಿಳಾಗೋಷ್ಠಿ ೬.೧೧.೨೦೦೦ದಂದು ನೂರೊಂದು ಸ್ವಾಮಿಗಳ ಪಾದಪೂಜೆ ನಡೆದವು. ಮೂರೂ ದಿನಗಳಲ್ಲಿ ವಚನ-ಗಾಯನ, ಶರಣರ ನಾಟಕ, ಶಿವಕಥಾಶ್ರವಣಗಳು ತುಂಬಿಬಂದವು. ದಾಸೋಹ ಸೇವೆ ಮೂರೂ ದಿನಗಳು ನಿರಂತರವಾಗಿ ನಡೆಯಿತು. ಶಿವಯೋಗಿ ಶ್ರೀ ಅಟವೀ ಮಹಾಸ್ವಾಮಿಗಳ ಸ್ಮರಣೆ ಜನತೆಯಲ್ಲಿನ ಪವಿತ್ರ ಭಾವವನ್ನು ಅರಳಿಸಿದ್ದು ವಿಶೇಷ.

ವರದಿ : ಹೆಚ್.ವಿ. ವೀರಭದ್ರಯ್ಯ

''..........ತಂತಮ್ಮ ಭಾಷೆಯ ವಿಷಯದಲ್ಲಿ ನಿರಭಿಮಾನವೂ ಸಲ್ಲದು, ದುರಭಿಮಾನವೂ ಸಲ್ಲದು. ಸದಭಿಮಾನವಿರಬೇಕು......... ಕನ್ನಡ ಕುಲ, ಕನ್ನಡ ಕುಟುಂಬ ಎಂಬ ಸದಭಿಮಾನವೇ ನಮ್ಮನ್ನು ಕೂಡಿಸಬಲ್ಲದು......... ಕನ್ನಡಿಗರು ಬೇರೆ ಭಾಷೆಗಳನ್ನು ಕಲಿಯಬಹುದು, ಮೆಚ್ಚಬಹುದು, ಆದರೆ ಕನ್ನಡದಲ್ಲಿಯೇ ಆಡಳಿತದ ವ್ಯವಹಾರಗಳು, ವಿಧಾನಸಭೆಯ ಮತ್ತು ನ್ಯಾಯಾಲಯದ ಕಾರ್ಯಕಲಾಪಗಳು, ವಿಶ್ವವಿದ್ಯಾಲಯದ ಪಾಠ ಪ್ರವಚನಗಳು ನಡೆಯುವುದಾದರೆ ಮಾತ್ರ ಬಹುಸಂಖ್ಯೆಯ ಕನ್ನಡಿಗರು ರಾಜ್ಯ ಕಾರಭಾರದಲ್ಲಿ ತಂತಮ್ಮ ಪಾತ್ರವನ್ನು ವಹಿಸಬಲ್ಲವರಾಗುತ್ತಾರೆ........ ಹೆಚ್ಚು ಹೆಚ್ಚಾದ ಕನ್ನಡ ಜನ ಉಚ್ಚವಾದ ಜ್ಞಾನವನ್ನೂ, ತಿಳುವಳಿಕೆಯನ್ನೂ ಪಡೆಯಬೇಕೆಂಬುದು, ಶಿಕ್ಷಣ ಮಾಧ್ಯಮವು ವಿಶ್ವವಿದ್ಯಾಲಯಗಳಲ್ಲಿ ಕನ್ನಡವಾಗದೆ ಇದು ಸಾಧ್ಯವಿಲ್ಲ.......... ಶುಚಿಯಾದ, ರುಚಿಯಾದ ಕನ್ನಡವು ನಮ್ಮ ನಾಲಗೆಯ ಮೇಲೆ ಯಾವಾಗಲೂ ನಲಿದಾಡಬೇಕು....... ಈ ದೃಷ್ಟಿಯಿಂದ ಕನ್ನಡ ವಾಚಕರು ತಮ್ಮ ಕೌಟುಂಬಿಕ ಅರ್ಥವ್ಯವಸ್ಥೆಯಲ್ಲಿ ಸಾಹಿತ್ಯ ಸಂಗ್ರಹಕ್ಕೆಂದು ಪ್ರತ್ಯೇಕವಾಗಿ ಹಣವಿರಿಸಿ ಒಳ್ಳೆಯ ಪುಸ್ತಕಗಳನ್ನು ಹೆಚ್ಚು ಹೆಚ್ಚಾಗಿ ಕೊಂಡು, ಸಾಹಿತ್ಯೋಪಾಸಕರ ಉದರ ನಿರ್ವಾಹಕ್ಕೆ ನೆರವಾಗ ಬೇಕು.........''

- ಡಾ. ರಂ.ಶ್ರೀ. ಮುಗಳಿ
೧೯೬೩ರಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ
ನಲವತ್ತನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು





## ತುಮಕೂರು ಹೆಚ್.ಎಂ.ಟಿ. ಕೈಗಡಿಯಾರ ಕಾರ್ಖಾನೆ ವತಿಯಿಂದ

# ದಾಸೋಹ ನಿಧಿಗೆ ಕೊಡುಗೆ



ತುಮಕೂರಿನ ಹೆಚ್.ಎಂ.ಟಿ. ಕೈಗಡಿಯಾರ ಕಾರ್ಖಾನೆಗೆ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ದಿನಾಂಕ ೧೨.೧೦.೨೦೦೦, ಗುರುವಾರ ಭೇಟಿ ನೀಡಿದಾಗ ಶ್ರೀಗಳಿಗೆ ಮಂಗಳವಾದ್ಯ ಮತ್ತು ವೇದಘೋಷದೊಂದಿಗೆ ಭವ್ಯ ಸ್ವಾಗತ ನೀಡಲಾಯಿತು. ಕಾರ್ಖಾನೆಯ ಮಹಾಪ್ರಬಂಧಕರಾದ ಬಿ.ಎಲ್. ಕೌಲ್‌ರವರು ಪಾದಪೂಜೆ ನೆರವೇರಿಸಿದರು. ಕಾರ್ಖಾನೆಯ ಮಾನವ ಸಂಪನ್ಮೂಲ ಪ್ರಬಂಧಕರಾದ ಡಾ|| ಜಿ. ವೆಂಕಟೇಶಲು ಸ್ವಾಗತಿಸಿದರು. ಶ್ರೀಗಳು ನೌಕರರನ್ನು ಉದ್ದೇಶಿಸಿ ಆಶೀರ್ವಚನ ನೀಡುತ್ತಾ, ''ಒಂದು ರಾಷ್ಟ್ರ ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಗತಿ ಹೊಂದಬೇಕಾದರೆ ಕೃಷಿ ಹಾಗೂ ಕೈಗಾರಿಕಾ ಬೆಳವಣಿಗೆಯಾಗಬೇಕು. ಅದರಂತೆ ತುಮಕೂರಿನಲ್ಲಿ ಹೆಚ್.ಎಂ.ಟಿ. ಕಾರ್ಖಾನೆ ಪ್ರಾರಂಭವಾದ ಹಿನ್ನೆಲೆಯನ್ನು ತಿಳಿಸುತ್ತಾ ಅಂದಿನಿಂದ ಹಲವಾರು ವರ್ಷ ಲಾಭದಾಯಕವಾಗಿ ಬೆಳೆದು, ಅಂತರರಾಷ್ಟ್ರೀಯ ಮಟ್ಟದಲ್ಲಿ ಒಳ್ಳೆಯ ಹೆಸರು ಗಳಿಸಿತು. ಈಗ ನಷ್ಟದಲ್ಲಿರುವಾಗ ಸರಕಾರ ಪುನಃಶ್ಚೇತನಕ್ಕೆ ಧನಸಹಾಯ ನೀಡಿದೆ. ಇದನ್ನು ಸರಿಯಾಗಿ ವಿನಿಯೋಗಿಸಿಕೊಂಡು ಎಲ್ಲರೂ ಶ್ರದ್ಧೆಯಿಂದ ಶ್ರಮವಹಿಸಿ ಮತ್ತೆ ಕಾರ್ಖಾನೆಯನ್ನು ಲಾಭದಾಯಕದತ್ತ ಕೊಂಡೊಯ್ಯಿರಿ. ಹಾಗೆ ಶ್ರೀಕ್ಷೇತ್ರದ ಬಗ್ಗೆ ಅಪಾರ ಅಭಿಮಾನವುಳ್ಳವರಾಗಿದ್ದೀರಿ, ತುಂಬಾ ಸಂತೋಷ. ಭಗವಂತ ನಿಮ್ಮೆಲ್ಲರಿಗೂ ಒಳ್ಳೆಯದನ್ನು ಮಾಡಲಿ'' ಎಂದು ತಿಳಿಸಿದರು.

ಶ್ರೀಗಳಿಗೆ ಪಾದಪೂಜೆಯನ್ನು ಕಾರ್ಖಾನೆಯ ಮಹಾಪ್ರಬಂಧಕರಾದ ಬಿ.ಎಲ್. ಕೌಲ್‌ರವರು ಮಾಡಿದರು. ನಂತರ ಶ್ರೀಗಳವರನ್ನು ವಿವಿಧ ವಿಭಾಗಗಳಿಗೆ ಕರೆದುಕೊಂಡು ಹೋಗಿ ವಿವಿಧ ಬಗೆಯ ಗಡಿಯಾರಗಳ ನಮೂನೆಗಳನ್ನು ತೋರಿಸಲಾಯಿತು. ಕಾರ್ಮಿಕರು ಸಂತೋಷ, ಸಂಭ್ರಮದಿಂದ ತಮ್ಮ ತಮ್ಮ ವಿಭಾಗಗಳಿಗೆ ಬರಮಾಡಿಕೊಂಡರು. ಇದೇ ಸಂದರ್ಭದಲ್ಲಿ ಶ್ರೀಕ್ಷೇತ್ರದಲ್ಲಿ ಸ್ಥಾಪಿಸಿರುವ ದಾಸೋಹ ನಿಧಿಗೆ ಕಾರ್ಖಾನೆಯ ಅಧಿಕಾರಿಗಳು ಹಾಗೂ ಕಾರ್ಮಿಕ ಸಂಘದ ವತಿಯಿಂದ ರೂ. ೧,೬೪,೨೫ಂಗಳ ಚೆಕ್ಕನ್ನು ಪರಮಪೂಜ್ಯ ಶ್ರೀಗಳವರಿಗೆ ಅರ್ಪಿಸಿದರು.

ವರದಿ : ಬಿ.ಎಸ್. ರುದ್ರೇಶಯ್ಯ

## ಶ್ರೀಮಠದಲ್ಲಿ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸವಿ ನೆನಪಿನ ಕ್ರೀಡಾಕೂಟ



ಶ್ರೀಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ತುಮಕೂರು ಉಪ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಗಾ.ನಂ. ಶ್ರೀಕಂಠಯ್ಯ ಹಾಗೂ ತುಮಕೂರು ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಾದ ಶ್ರೀಮತಿ ರೆಹಮತ್ ಉನ್ನೀಸಾರವರು ಜ್ಯೋತಿ ಬೆಳಗಿಸಿ ಕ್ರೀಡಾಕೂಟವನ್ನು ಉದ್ಘಾಟಿಸಿದರು.



ಕ್ರೀಡಾಸ್ಪರ್ಧಿಗಳಿಂದ ಪಥಚಲನ

ದಿನಾಂಕ ೦೪.೧೧.೨೦೦೦ನೇ ಶನಿವಾರ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಕ್ರೀಡಾಕೂಟದ ಉದ್ಘಾಟನೆಯನ್ನು, ತುಮಕೂರಿನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಾದ ಗಾ.ನಂ. ಶ್ರೀಕಂಠಯ್ಯನವರು ನೆರವೇರಿಸಿ, 'ಇಂಥಾ ಕ್ರೀಡಾಕೂಟಗಳು ಮಕ್ಕಳಲ್ಲಿ ಸ್ಪರ್ಧಾ ಮನೋಭಾವನೆ ಯನ್ನು ಬೆಳೆಸಿ ಉತ್ತಮ ಪ್ರಜೆಗಳನ್ನಾಗಿ ಮಾಡುತ್ತವೆ. ಸಿದ್ಧಗಂಗಾ ವಿದ್ಯಾಸಂಸ್ಥೆಗಳ ಈ ಕಾರ್ಯ ಸ್ತುತ್ಯಾರ್ಹವಾಗಿದೆ' ಎಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ತುಮಕೂರಿನ ಸಾರ್ವಜನಿಕ ಶಿಕ್ಷಣ ಇಲಾಖೆ ನಿರ್ದೇಶಕರಾದ ಶ್ರೀಮತಿ ರಹಮತ್ ಉನ್ನೀಸಾ ಅವರು, 'ಕ್ರೀಡೆಗಳು ವಿದ್ಯಾರ್ಥಿಗಳನ್ನು ಆರೋಗ್ಯವಂತರನ್ನಾಗಿಸುತ್ತವೆ. ಯಾವುದೇ ಕಾರ್ಯವನ್ನು ಮಾಡಲು ಉತ್ತಮ ಆರೋಗ್ಯ ಬೇಕು, ಖಾಸಗಿ ವಿದ್ಯಾಸಂಸ್ಥೆಗಳು ಈ ದಿಸೆಯಲ್ಲಿ ಒಳ್ಳೆಯ ಕಾರ್ಯವೆಸಗುತ್ತಿವೆ' ಎಂದರು.

ದಿವ್ಯ ಸಾನ್ನಿಧ್ಯ ವಹಿಸಿದ್ದ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ, 'ಕ್ರೀಡೆಗಳು ಮಾನವನ ಅತ್ಯಂತ ಪುರಾತನವಾದ ಕಲೆ. ಮಾನವನ ಜೊತೆ ಜೊತೆಯಲ್ಲಿಯೇ ಈ ಕ್ರೀಡೆಗಳು ಬೆಳೆದುಬಂದವು. ರಾಮಾಯಣ, ಮಹಾಭಾರತದಲ್ಲಿ ಇವುಗಳ ಉಲ್ಲೇಖವನ್ನು ಕಾಣುತ್ತೇವೆ. ಧರ್ಮಸಾಧನೆಗೆ ಆರೋಗ್ಯವಂತ ಶರೀರಬೇಕು. ಆದ್ದರಿಂದ ಇಂಥಾ ಕ್ರೀಡಾಕೂಟಗಳ ಗ್ರಾಮೀಣ ಪ್ರತಿಭೆಗಳನ್ನು ಗುರುತಿಸಲು ಸಹಕಾರಿಯಾಗುತ್ತವೆ'' ಎಂದು ತಿಳಿಸಿದರು.

ದಿನಾಂಕ ೦೫.೧೧.೨೦೦೦ನೇ ಭಾನುವಾರ, ಸಂಜೆ ಮುಕ್ತಾಯ ಸಮಾರಂಭವೇರ್ಪಟ್ಟಿತು. ತುಮಕೂರಿನ ವಿದ್ಯಾವಾಹಿನಿ ವಿದ್ಯಾಸಂಸ್ಥೆಯ ಸಂಸ್ಥಾಪಕ ಕಾರ್ಯದರ್ಶಿಗಳಾದ ಶ್ರೀ ಕೆ.ಟಿ. ಜಯಣ್ಣನವರು ಬಹುಮಾನ ವಿತರಣೆ ಮಾಡಿ, ''ಸಿದ್ಧಗಂಗಾ ವಿದ್ಯಾಸಂಸ್ಥೆಯ ಈ ಕಾರ್ಯ ಅತ್ಯಂತ ಸ್ತುತ್ಯಾರ್ಹವಾದುದು. ಯುವ ಪೀಳಿಗೆಯ ವಿದ್ಯಾರ್ಥಿಗಳು ಪಠ್ಯಪುಸ್ತಕಗಳಿಗೆ ಕೊಡುವ ಗಮನದಷ್ಟೇ ಕ್ರೀಡೆಗಳಿಗೂ ಗಮನ ಕೊಡಬೇಕು. ಗೆದ್ದೆವೆಂದು ಹಿಗ್ಗುವುದು ಬೇಡ, ಸೋತೆವೆಂದು ಕುಗ್ಗುವುದೂ ಬೇಡ, ಭಾಗವಹಿಸಿದೆನೆಂಬ ಹೆಮ್ಮೆ ನಿಮಗಿರಲಿ. ಈ ಆಟಗಳನ್ನು ಜೀವನದಲ್ಲಿ ಮುಂದುವರಿಸಿಕೊಂಡು ಹೋಗಬೇಕು'' ಎಂದರು.








ಗಣ್ಯರಿಂದ ಕ್ರೀಡಾ ಪಥಚಲನದ ವೀಕ್ಷಣೆ

ಈ ಕ್ರೀಡಾಕೂಟದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ೫೩ ಪ್ರೌಢಶಾಲೆಗಳು, ೭ ಪ್ರಾಥಮಿಕ ಶಾಲೆಗಳು ಪಾಲ್ಗೊಂಡವು. ೯೬೦ ಕ್ರೀಡಾಪಟುಗಳು, ೬೫ ಕ್ರೀಡಾಧಿಕಾರಿಗಳು ಭಾಗವಹಿಸಿದ್ದರು.

### ಪ್ರೌಢಶಾಲಾ ವಿಭಾಗದಲ್ಲಿ

ತುಮಕೂರಿನ ಸಿದ್ಧಗಂಗಾ ಜೂನಿಯರ್ ಕಾಲೇಜು ವಾಲಿಬಾಲ್‌ನಲ್ಲಿ ಪ್ರಥಮ ಸ್ಥಾನವನ್ನು, ಬೂದಿಗೆರೆಯ ಸಿದ್ಧಗಂಗಾ ಜೂನಿಯರ್ ಕಾಲೇಜು ದ್ವಿತೀಯ ಸ್ಥಾನ ಪಡೆಯಿತು.

ಶ್ರೀ ಬಸವೇಶ್ವರ ಪ್ರೌಢಶಾಲೆ, ತೋಟಗೆರೆ ಖೋ-ಖೋ ಆಟದಲ್ಲಿ ಪ್ರಥಮ ಸ್ಥಾನವನ್ನು, ಶುಕ್ರವಾರಸಂತೆಯ ಸಿದ್ಧಗಂಗಾ ಪ್ರೌಢಶಾಲೆಯು ದ್ವಿತೀಯ ಸ್ಥಾನವನ್ನು ಪಡೆಯಿತು.

### ಪ್ರಾಥಮಿಕ ವಿಭಾಗದಲ್ಲಿ

ಶ್ರೀಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಹಿರಿಯ ಪ್ರಾಥಮಿಕ ಪಾಠಶಾಲೆ ವಾಲಿಬಾಲ್‌ನಲ್ಲಿ ಪ್ರಥಮ ಸ್ಥಾನ, ತುಮಕೂರಿನ ಸಿದ್ಧಗಂಗಾ ಪ್ರಾಯೋಗಿಕ ಪಾಠಶಾಲೆ, ದ್ವಿತೀಯ ಸ್ಥಾನ ಪಡೆದವು.

ಬೆಂಗಳೂರಿನ ಅಂಬಿಕಾ ಪ್ರಾಥಮಿಕ ಪಾಠಶಾಲೆ ಖೋ-ಖೋ ಆಟದಲ್ಲಿ ಪ್ರಥಮ ಸ್ಥಾನವನ್ನೂ, ಸನಿವಾಸ ಹಿರಿಯ ಪ್ರಾಥಮಿಕ ಪಾಠಶಾಲೆ ದ್ವಿತೀಯ ಸ್ಥಾನ ಪಡೆಯಿತು.

ಪಿ.ಎಸ್. ಸಿದ್ಧಗಂಗಯ್ಯನವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಜಿ. ಗವಿಸಿದ್ಧಯ್ಯನವರು ಸ್ವಾಗತಿಸಿದರು, ಟಿ. ಚಂದ್ರಶೇಖರಯ್ಯನವರು ವಂದನಾರ್ಪಣೆ ಮಾಡಿದರು, ಡಿ.ಎಸ್. ನಾಗರಾಜು ಕಾರ್ಯಕ್ರಮ ನಿರೂಪಣೆ ಮಾಡಿದರು. □

''..........ಮೊದಲು ನಮ್ಮ ವ್ಯವಹಾರದಲ್ಲಿ ಕನ್ನಡ ಭಾಷೆಯನ್ನೇ ಹೆಚ್ಚಾಗಿ ಉಪಯೋಗಿಸಲಾರಂಭಿಸಬೇಕು. ನಮ್ಮ ಸಹಕಾರ, ವ್ಯವಹಾರ, ಧಾರ್ಮಿಕ ವಿಚಾರ, ವ್ಯಾಪಾರ, ಸಾರ್ವಜನಿಕ ವಿಚಾರಗಳಲ್ಲಿ ಮಾತ್ರವಲ್ಲದೆ ವಿದ್ಯಾಭ್ಯಾಸ ಪದ್ಧತಿಯಲ್ಲಿಯೂ ಕನ್ನಡವನ್ನೇ ಹೆಚ್ಚಾಗಿ ಬಳಕೆಗೆ ತರಬೇಕು..........''

- ಎನ್.ಎಸ್. ಸುಬ್ಬರಾಯರು
೧೯೩೫ರಲ್ಲಿ ಬೊಂಬಾಯಿಯಲ್ಲಿ ನಡೆದ
ಇಪ್ಪತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೨೩. | **ಶ್ರೀ ಶಿವಸಿದ್ಧಯ್ಯ**<br>ಮಾಲೀಕರು, ಶ್ವೇತ ಇಂಜಿನಿಯರಿಂಗ್ ವರ್ಕ್ಸ್,<br>ಪೃಥ್ವಿ ಎಂಟರ್‌ಪ್ರೈಸಸ್, ನಂ. ೨೭೨೮,<br>೧೩ನೇ ಕ್ರಾಸ್, ಪೈಪ್‌ಲೈನ್ ರಸ್ತೆ,<br>ಚೂಳೂರು ಪಾಳ್ಯ, ಬೆಂಗಳೂರು-೨೩ | ೨,೫೦೦-೦೦ |
| ೩೨೪. | **ಶ್ರೀ ಸಿ. ರೇಣುಕಯ್ಯ,**<br>ಶ್ರೀ ರೇಣುಕ ಸ್ಟೋರ್,<br>ಚುಂಚನಕುಪ್ಪೆ ಮತ್ತು ಅಂಚೆ,<br>ಬೆಂಗಳೂರು ದಕ್ಷಿಣ ತಾಲ್ಲೂಕು. | ೧,೦೦೦-೦೦<br>(೧ನೇ ಕಂತು) |
| ೩೨೫. | **ಶ್ರೀ ವೈ.ಜಿ. ರೇವಣಸಿದ್ಧಯ್ಯ**<br>ನಿವೃತ್ತ ಶಿಕ್ಷಕರು, ನಂ. ೫೮೧/೧೬,<br>೮ನೇ ಮುಖ್ಯರಸ್ತೆ, ಎಂ.ಆರ್.ಸಿ.ಆರ್. ಬಡಾವಣೆ,<br>ವಿಜಯನಗರ, ಬೆಂಗಳೂರು-೪೦. | ೫,೦೦೦-೦೦ |
| ೩೨೬. | **ಶ್ರೀ ಆರ್. ಸದಾನಂದಮೂರ್ತಿ**<br>ಸುಷ್ಮಾ ಇಂಡಸ್ಟ್ರೀಸ್, ಪ್ಲಾಟ್ ನಂ. ೧೮೯,<br>೧ನೇ ಬ್ಲಾಕ್, ೨ ಮುಖ್ಯರಸ್ತೆ, ೨ನೇ ಹಂತ,<br>ಪೀಣ್ಯ ಕೈಗಾರಿಕ ಪ್ರದೇಶ, ಪೀಣ್ಯ<br>ಬೆಂಗಳೂರು-೫೮ | ೧,೦೦೦-೦೦<br>(೧ನೇ ಕಂತು) |
| ೩೨೭. | **ಶ್ರೀ ವಿ.ಎಂ.ಸಿ. ರುದ್ರಮುನಿಯಪ್ಪ**<br>ನಂ. ೨೭, (ಹಳೆ ನಂ. ೧೪),<br>೬ನೇ ಕ್ರಾಸ್, ಈಜುಕೊಳದ ಬಡಾವಣೆ,<br>ಮಲ್ಲೇಶ್ವರಂ, ಬೆಂಗಳೂರು-೦೩ | ೨,೦೦೧-೦೦ |
| ೩೨೮. | **ಶ್ರೀ ಸಿ. ಗುರುಸ್ವಾಮಿ**<br>ಶಾಸಕರು, ಚಾಮರಾಜನಗರ,<br>ಕೆ.ಎನ್. ಪುರ ರಸ್ತೆ,<br>ಚಾಮರಾಜನಗರ ಜಿಲ್ಲೆ. | ೨,೦೦೧-೦೦ |
| ೩೨೯. | **ಶ್ರೀ ಗೋವಿಂದರಾಜು,** ಕೆ.ಎ.ಎಸ್<br>ನಂ. ೩೦೫, ೩ನೇ ಮುಖ್ಯರಸ್ತೆ,<br>೩ನೇ ಹಂತ, ಮಂಜುನಾಥನಗರ, ಬೆಂಗಳೂರು-೧೦ | ೧,೦೦೧-೦೦<br>(೧ನೇ ಕಂತು) |
| ೩೩೦. | **ಶ್ರೀಮತಿ ಕುಸುಮ ಕೆ.ಎಸ್. ರಾಜಣ್ಣ ಮತ್ತು ಕುಟುಂಬ**<br>ಗೋವಿಂದಪ್ಪ ಬಡಾವಣೆ, ಸುಭಾಷ್‌ನಗರ,<br>ನೆಲಮಂಗಲ-೫೬೨೧೨೩. | ೨,೦೦೧-೦೦ |
| ೩೩೧. | **ಶ್ರೀ ಮಲ್ಲಿಕಾರ್ಜುನಯ್ಯ**<br>ತಂದೆ ಶಿವರುದ್ರಯ್ಯ,<br>ಹುಸ್ಕೂರು, ದಾಸನಪುರ ಹೋಬಳಿ,<br>ಬೆಂಗಳೂರು ಉತ್ತರ ತಾಲ್ಲೂಕು-೫೬೨೧೨೩. | ೨,೦೦೧-೦೦ |
| ೩೩೨. | **ಶ್ರೀ ಆರ್. ಶಿವಕುಮಾರಸ್ವಾಮಿ**<br>ತಂದೆ ರೇವಣಸಿದ್ಧಯ್ಯ,<br>ನಂ. ೬೦೬, ಮೊದಲನೇ ಕ್ರಾಸ್,<br>ವಿಶ್ವಮಾನವ ಡಬಲ್ ರಸ್ತೆ,<br>ಕುವೆಂಪುನಗರ, ಮೈಸೂರು-೫೭೦೦೨೩ | ೧,೦೦೦-೦೦<br>(೧ನೇ ಕಂತು) |
| ೩೩೩. | **ಶ್ರೀ ಶಿವಲಿಂಗಯ್ಯ**<br>ನಿವೃತ್ತ ಶಿಕ್ಷಕರು,<br>ಸಿದ್ಧಗಂಗಾ ಪಾಳ್ಯ, ಕ್ಯಾತಸಂದ್ರ ಅಂಚೆ,<br>ತುಮಕೂರು ತಾಲ್ಲೂಕು. | ೧,೦೦೦-೦೦<br>(೧ನೇ ಕಂತು) |
| ೩೩೪. | **ಶ್ರೀ ಪಿ.ಎಸ್. ಪುಟ್ಟಶಂಕರಯ್ಯ**<br>ನಂ. ೭೫೫/೨೦, ೮ನೇ ಕ್ರಾಸ್,<br>ಎಂ.ಆರ್.ಸಿ.ಆರ್. ಬಡಾವಣೆ,<br>ವಿಜಯನಗರ, ಬೆಂಗಳೂರು-೪೦ | ೨,೦೦೧-೦೦ |
| ೩೩೫. | **ಶ್ರೀ ಬಿ.ಎಂ. ಪರಮೇಶ್ವರಪ್ಪ**<br>ಎಕ್ಸಿಕ್ಯೂಟಿವ್ ಇಂಜಿನಿಯರ್,<br>ಕೆ.ಪಿ.ಸಿ.ಎಲ್., ದಾಂಡೇಲಿ,<br>ಉತ್ತರ ಕನ್ನಡ-೫೮೧೩೨೫ | ೧,೦೦೦-೦೦<br>(೧ನೇ ಕಂತು) |
| ೩೩೬. | **ಶ್ರೀ ನಂಜುಂಡಯ್ಯ**<br>ನಿವೃತ್ತ ಮುಖ್ಯೋಪಾಧ್ಯಾಯರು,<br>'ಚನ್ನಕೇಶವ ನಿಲಯ', ಕುವೆಂಪು ರಸ್ತೆ,<br>೩ನೇ ಕ್ರಾಸ್, ರಾಘವೇಂದ್ರ ನಗರ,<br>ತುಮಕೂರು. | ೧,೦೦೮-೦೦<br>(೧ನೇ ಕಂತು) |
| ೩೩೭. | **ಶ್ರೀ ಕೆ.ಬಿ. ಶಿವಲಿಂಗಣ್ಣ**<br>ನಂ. ೧೧, ಪಾಪಯ್ಯ ಗಾರ್ಡನ್,<br>ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ,<br>ಬಸವೇಶ್ವರನಗರ, ಬೆಂಗಳೂರು-೭೯ | ೫,೦೦೧-೦೦ |
| ೩೩೮. | **ಶ್ರೀ ಬಿ. ಅಡವೀಶಯ್ಯ ಮತ್ತು ವೀರಣ್ಣ**<br>(ಒಜೇನಹಳ್ಳಿ), ನಂ. ೩೦, ೮ನೇ ಕ್ರಾಸ್,<br>ಎಸ್.ಎಸ್. ಪುರಂ, ತುಮಕೂರು-೫೭೨೧೦೨ | ೧,೦೦೦-೦೦<br>(೧ನೇ ಕಂತು) |

(ಮುಂದುವರಿಯುತ್ತದೆ)

